NARASIMHARAJA WADIYAR SERIES.

# ರಾಮೇಶ್ವರನ ಅದೃಷ್ಟ



ಮೂರನೆಯ ಸಂಸ್ಕರಣ.

ಬಿ. ವೆಂಕಟಾಚಾರ್ಯರು.



ಕ್ರಯ 0-6-0]

ಶ್ರೀಯೈನಮಃ.



# ರಾಮೇಶ್ವರನ ಅದೃಷ್ಟ.

## ಮೊದಲನೆಯ ಪರಿಚ್ಛೇದ.

ರಾಮೇಶ್ವರಶರ್ಮನಿಗೆ ಮೂವತ್ತೈದನೆಯ ವರುಷದಲ್ಲಿ ಪಿತೃವಿಯೋಗ ಉಂಟಾಯಿತು. ಅವನು ತಂದೆಯನ್ನು ಬಹಳವಾಗಿ ಪ್ರೀತಿಸಿ ಗೌರವಿಸುತಲಿದ್ದನು. ರಾಮೇಶ್ವರನ ತಂದೆಯು ಘಳಿಸಾಳಾಗಿದ್ದು ಅಲ್ಪಸ್ವಲ್ಪ ಘಳಿಸಿಟ್ಟಿದ್ದುದನ್ನೆಲ್ಲಾ ರಾಮೇಶ್ವರನು ಆತನ ಶ್ರಾದ್ಧಕ್ಕೆ ವೆಚ್ಚಮಾಡಿಬಿಟ್ಟನು. ತಂದೆಯ ಸ್ವರ್ಗಾರೋಹಣಕ್ಕೋಸ್ಕರ ತನ್ನ ಯೋಗ್ಯತೆಗೆ ಮೀರಿ ಮಡಲ್ತ ಮನುಷ್ಯರು ಅನವಶ್ಯಕವಾಗಿ ಯಾರು ಏನು ಹೇಳಿದರೂ ಅದನ್ನೆಲ್ಲಾ ಮಾಡಿದನು. ಶ್ರಾದ್ಧಾದಿ ಕ್ರಿಯೆಗಳೆಲ್ಲಾ ಪೂರೈಸಿದವು. ಬಂದಿದ್ದ ಬಂಧು ಬಳಗದವರೆಲ್ಲರೂ ತಮ್ಮ ತಮ್ಮ ಊರಿಗೆ ಹೊರಟುಹೋದರು. ಅನಂತರ ರಾಮೇಶ್ವರನಿಗೆ ಮನೆಯಲ್ಲಿ ಇನ್ನೇನೂ ಉಳಿದಿಲ್ಲವೆಂದು ಗೊತ್ತಾಯಿತು. ಪರಿವಾರದ ಭರಣಪೋಷಣವನ್ನು ಮಾಡುವುದು ಕಷ್ಟಕ್ಕೆ ಬಂದಿತು. ಮನೆಯಲ್ಲಿ ಯುವತಿಯಾದ ಹೆಂಡತಿ ಪಾರ್ವತಿ ಮೂರು ವರ್ಷದ ಮಗು ಆನಂದದುಲ್ಲಾಲ. ಒಂದು ದಿನ ಮನೆಯಲ್ಲಿ ಎಲ್ಲರಿಗೂ ಉಪವಾಸವ್ರತವಾಯಿತು ಮಗುವು ಹಸಿವೆಯಿಂದ ಅಳಲಾರಂಭಿಸಿತು. ಮಗುವಿನ ಅಳುವನ್ನು ನೋಡಿ ಪಾರ್ವತಿಯೂ ಅಳುವುದಕ್ಕೆ ತೊಡಗಿದಳು. ರಾಮೇ

ಶ್ವರನು ಊಟಕ್ಕೆ ಏನಾದರೂ ಸಂಪಾದಿಸಿಕೊಂಡು ಬರೋಣವೆಂದು ಹೊರಗೆ ಹೋಗಿದ್ದನು. ನಿಷ್ಫಲವಾಗಿ ಬರೆ ಕೈಯಲ್ಲಿ ಬಂದು ನೋಡಲಾಗಿ ಮಗುವೂ ಹೆಂಡತಿಯೂ ಅವನ ಬರುವಿಕೆಯನ್ನು ಎದುರು ನೋಡಿಕೊಂಡು ಬಿಸಿಲಲ್ಲಿ ಕಾದು ಕೂತಿದ್ದರು. ಬೀದಿಯಲ್ಲಿ ಸ್ವಲ್ಪ ದೂರದಲ್ಲಿ ಬ್ರಾಹ್ಮಣರು ಊಟಮಾಡಿ ಎಸೆದಿದ್ದ ಒಡೆದ ಮಡಿಕೆಗಳಲ್ಲಿಯೂ, ಬರೆ ಎಂಜಲೆಲೆಗಳ ರಾಶಿಯಲ್ಲಿಯೂ, ಊರು ನಾಯಿಗಳು ತಿನ್ನುವುದಕ್ಕೇನಾದರೂ ಸಿಕ್ಕಬಹುದೆಂಬ ಆಸೆಯಿಂದ ಎಲೆಗಳ ರಾಶಿಯನ್ನು ಕೆದರಿ ಒಡೆದ ಮಡಿಕೆಗಳನ್ನುರುಡಿಸಿ ಮೂತಿಯಿಟ್ಟು ಮೂಸಿನೋಡುತಲಿದ್ದುವು. ಮಗುವು ಅದನ್ನು ಒಂದೇ ದೃಷ್ಟಿಯಿಂದ ನೋಡುತಲಿದ್ದಿತು. ರಾಮೇಶ್ವರನು ಬಂದುದನ್ನು ಕಂಡು ಮಗುವು ಓಡಿಹೋಗಿ ಅಪ್ಪಾ! ತಿಂಡಿಯೇನು ತಂದೆಯೆಂದು ಕೂಗಿ ಕೇಳಿತು. ರಾಮೇಶ್ವರನ ಕಣ್ಣುಗಳಲ್ಲಿ ನೀರು ತುಂಬಿತು. ಅದನ್ನು ನೋಡಿ ಪಾರ್ವತಿಯ ಕಣ್ಣುಗಳಲ್ಲಿ ನೀರು ಸುರಿಯಿತು. ಮಗುವಿನ ಮುಖವನ್ನು ನೋಡಿ ಇಬ್ಬರ ಕಣ್ಣೀರಿನ ಪ್ರವಾಹವು ಪ್ರಬಲವಾಗಿ ಹರಿಯಲಾರಂಭವಾಯಿತು. ಪಾರ್ವತಿಯು ಮುಖವೆತ್ತಿ ಪುನಃ ಸ್ವಾಮಿಯ ಮುಖವನ್ನು ನೋಡುತಲೇ ಇಬ್ಬರೂ ಘಟ್ಟಿಯಾಗಿ ಬಿಕ್ಕಿ ಬಿಕ್ಕಿ ಅತ್ತರು. ಮಗುವು ಅವರಿಬ್ಬರ ಮುಖವನ್ನು ಒಂದೆರಡು ತಡವೆ ನೋಡಿ ಕಡೆಗೆ ಅಳುವುದಕ್ಕೆ ತೊಡಗಿತು. ಮೂವರೂ ಏಕತ್ರವಾಗಿ ಬಹಳಹೊತ್ತು ಅತ್ತರು. ಅತ್ತತ್ತು ಮಗುವಿಗೆ ನಿದ್ರೆ ಬಂದಿತು. ಅಷ್ಟು ಹೊತ್ತಿಗೆ ಸಾಯಂಕಾಲವಾಗಿದ್ದಿತು. ರಾಮೇಶ್ವರನು ಎದ್ದು ದೃಢವಾದ ಪ್ರತಿಜ್ಞೆಯುಳ್ಳವನಾಗಿ ಹೊರಟುಹೋದನು. ಒಂದು ಸ್ಥಳದಲ್ಲಿ ಪಾಲ್ಗಡಲಂತಿದ್ದ ಹೊಸ ಜೊನ್ನೆಯಲ್ಲಿ ತಳಕುತಲಿದ್ದ ಕಂಮಡುವಿಗೆ ಕಂಭಾವತಿಯ ಹಾಗೆ ಕಟ್ಟಿದ್ದ ಕಪ್ಪು ಶಿಲೆಗಳ ಸೋಪಾನಾವಳಿಯ ಮೇಲೆ ಇಬ್ಬರು ಯುವಕರು ಕುಳಿತುಕೊಂಡು ನೀರಿಗೆ ಪೈಸಾಗಳನ್ನು ಎಸೆದಾಡುವ ಜೂಜಾಟವನ್ನಾಡುತಲಿದ್ದರು. ಕಟ್ಟಳಲಿಕೆಯಿಂದ ಕುಗ್ಗಿದ್ದ ರಾಮೇಶ್ವರನು ಅವರಿಬ್ಬರ ಬಳಿಗೆ ಹೋಗಿ ದುಡ್ಡುಗಳನ್ನು ಕೊಡಬೇಕೆಂದು ಬೇಡಿದನು. ಯುವಕರಿಬ್ಬರೂ ಗಟ್ಟಿಯಾಗಿ ನಕ್ಕು ಅವರಲ್ಲೊಬ್ಬನು, ನಮ್ಮ ದುಡ್ಡನ್ನು ನಿನಗೇಕೆ ಕೊಡಬೇಕು? ಎಂದು ಹೇಳಿದನು. ರಾಮೇಶ್ವರನು ಕಾತರನಾಗಿ, ಅನ್ನವಿಲ್ಲದೆ ಹೆಂಡತಿ ಮಕ್ಕಳು ಸಾಯುತಲಿದ್ದಾರೆ, ನೀವು ದುಡ್ಡನ್ನು ನೀರಿನಲ್ಲಿ ಬಿಸಾಡುತಲಿದ್ದೀರೆಂದು ಹೇಳಿದನು. ಯುವಕರು, ನಮ್ಮ ದುಡ್ಡನ್ನು ನೀರಿನಲ್ಲಿ ಹಾಕಿದರೂ ಹಾಕುತ್ತೇವೆ;

ಏನುಬೇಕಾದರೂ ಮಾಡುತ್ತೇವೆ, ಅದರಿಂದ ನಿನಗೇನೊ ? ಎಂದು ರಾಮೇಶ್ವರನನ್ನು ಹೊಡೆಯುವುದಕ್ಕೆ ಹೋದರು. ರಾಮೇಶ್ವರನು ಅಂಬುತಾಕಿದ ಸಿಂಹದ ಹಾಗೆ ಮೆಲ್ಲ ಮೆಲ್ಲನೆ ಹೊರಟುಹೋದನು. ಸ್ವಲ್ಪದೂರ ಹೋಗಿ ಮನಸ್ಸಿನಲ್ಲಿ ಆ ಮಂಗಗಳಿಗೆ ಒಂದೊಂದು ಗುದ್ದುಕೊಟ್ಟು ಅವರಲ್ಲಿದ್ದ ದುಡ್ಡನ್ನು ಕಿತ್ತುಕೊಳ್ಳಬಹುದಾಗಿದ್ದಿತು. ಏತಕ್ಕೆ ಕಸರಿಕೊಳ್ಳದೆ ಹೋದೆನೋ ಎಂದು ಯೋಚಿಸಿಕೊಂಡನು. ರಾಮೇಶ್ವರನಿಗೆ ಅನ್ನಾಭಾವದಿಂದ ಹೊಟ್ಟೆಯು ಬೆನ್ನಿಗೆ ಹತ್ತಿ ಹೋಗಿದ್ದಕಾರಣ ಧರ್ಮಾಧರ್ಮಜ್ಞಾನವು ಲುಪ್ತವಾಗಿ ಹೋಗಿದ್ದಿತು.

ರಾಮೇಶ್ವರನು ಮತ್ತೊಂದು ಗ್ರಾಮಕ್ಕೆ ಹೋದನು. ಅಲ್ಲಿ ಹೋಗಿ ಒಂದು ಮನೆಯ ಬಳಿ ನಿಂತು ನೋಡಿದನು. ಮನೆಯೊಳಗೆ ಎಲ್ಲರೂ ಮಲಗಿದ್ದ ಹಾಗೆ ಕಂಡಿತು. ಆಗವನಿಗೆ ಹಸಿವೆಯಿಂದ ಕಂದಿದ್ದ ತನ್ನ ಕಂದಾನದ ದುಲ್ಲಾಲಸ ಮುಖವು ನೆನಪಿಗೆ ಬಂದಿತು. ಪಾರ್ವತಿಯು ಅಳುತಿದ್ದುದು ಸ್ಮರಣೆಗೆ ಬಂದಿತು. ಕ್ರೀಡಾಶೀಲರಾದ ಯುವಕರಿಬ್ಬರ ನಡೆತೆಯೂ ಜ್ಞಾಪಕಕ್ಕೆ ಬಂದಿತು ಇಷ್ಟೂ ಜ್ಞಾಪಕಕ್ಕೆ ಬಂದು ರಾಮೇಶ್ವರನು ಮನಸ್ಸಿನಲ್ಲಿ, ನಾನೊಬ್ಬನು ಮಾತ್ರ ಧರ್ಮಮಾರ್ಗದಲ್ಲಿರುವುದರಿಂದ ಪ್ರಯೋಜನವೇನು ? ಎಂದಂದುಕೊಂಡನು. ಅನಂತರ ಅವನು ಒಬ್ಬ ಗೃಹಸ್ಥನ ಮನೆಗೆ ಪ್ರವೇಶಮಾಡಿ ಅಲ್ಲಿ ದುಡ್ಡನ್ನು ಕಳವು ಮಾಡಿದನು. ಪೆಟ್ಟಿಗೆಯಲ್ಲಿ ಮೂರು ರೂಪಾಯಿ ಎಂಟಾಣೆಯಿದ್ದಿತು. ಅವನು ಎಂಟಾಣೆಯನ್ನು ಮಾತ್ರ ತೆಗೆದುಕೊಂಡು ಬಂದನು. ಗೃಹಸ್ಥರಲ್ಲಿ ಯಾರಿಗೂ ಇದು ತಿಳಿಯದು.

ರಾಮೇಶ್ವರನು ಬರುತ ಮನಸ್ಸಿನಲ್ಲಿ ದುಡ್ಡು ಸಿಕ್ಕಿದಹಾಗಾಯಿತು. ಇನ್ನು ಅಕ್ಕಿ ಉಪ್ಪು ಎಲ್ಲಿಂದ ಒದಗಿಸಲಿ ? ಎಂದು ಯೋಚಿಸುತ ಅಕ್ಕಿ ಉಪ್ಪು ಸಂಪಾದಿಸುವುದಕ್ಕೋಸ್ಕರ ಮತ್ತೊಂದು ಗ್ರಾಮಕ್ಕೆ ಹೋದನು. ಹತ್ತಿರ ನಾಲ್ಕೈದು ಗ್ರಾಮಗಳಿಗೆಲ್ಲಾ ಆ ಗ್ರಾಮದಲ್ಲಿ ಒಂದು ಅಂಗಡಿಯಿದ್ದಿತು. ಆ ಅಂಗಡಿಯ ಬಳಿಗೆ ಹೋಗಿ ಅಂಗಡಿಯವನನ್ನು ನಾಲ್ಕಾರುತಡವೆ ಕೂಗಿದನು. ಅಂಗಡಿಯವನು ಬೇರೆ ಸ್ಥಳದಲ್ಲಿದ್ದುದರಿಂದ ಯಾವುದೊಂದೂ ಪ್ರತ್ಯುತ್ತರ ಬರಲಿಲ್ಲ ಆಗವನು ಅಂಗಡಿಯ ಬಾಗಿಲನ್ನು ತೆಗೆದುಕೊಂಡು ಒಳಗೆ ಹೋಗಿ ರಾತ್ರಿಗೆ ಬೇಕಾದಷ್ಟು ಅಕ್ಕಿ ಉಪ್ಪು ಬೇಳೆಯನ್ನು ತೆಗೆದು ಧೋತ್ರದ ಸೆರಗಿನಲ್ಲಿ ಕಟ್ಟಿಕೊಂಡು, ಆ ಪದಾರ್ಥಗಳಿಗೆಲ್ಲಾ ತಕ್ಕ ಬೆಲೆಯಷ್ಟು ದುಡ್ಡನ್ನು

ಅಲ್ಲಿ ಇಟ್ಟುಬಿಟ್ಟು ಹೊರಗೆ ಹೊರಟನು. ಹಾದಿಯಲ್ಲಿ ಅತ್ಯಂತ ಭಯವುಂಟಾಯಿತು. ಆದರೆ ಯಾವುದೊಂದು ವಿಘ್ನವೂ ಉಂಟಾಗಲಿಲ್ಲ. ಮನೆಗೆ ಬಂದು ಸೇರಿದನು. ಪಾರ್ವತಿಯು ಅಡಿಗೆ ಮಾಡಿದಳು. ರಾಮೇಶ್ವರನೂ ಮಗುವೂ ಊಟಮಾಡಿದರು. ಪಾರ್ವತಿಯು ಊಟವನ್ನು ಮಾಡಲಿಲ್ಲ. ಪದಾರ್ಥಗಳು ತಂದುದು ಬಹಳ ಸ್ವಲ್ಪ. ಪಾರ್ವತಿಯು ಊಟಮಾಡಿದ್ದರೆ ಮಾರನೆಯ ದಿನಕ್ಕೆ ಏನೂ ಉಳಿಯುತಿರಲಿಲ್ಲ. ಪಾರ್ವತಿಯು ಉಪವಾಸ ಮಾಡಿದಳು. ಏಕಾಂತವಾಗಿ ತನ್ನ ಭಾಗವನ್ನು ಮಾರನೆಯ ದಿನಕ್ಕೆ ಸ್ವಾಮಿ ಮತ್ತು ಮಗುವಿಗೋಸ್ಕರ ಮಡಿಕೆಯಲ್ಲಿ ಹಾಗೆಯೇ ಮುಚ್ಚಿಟ್ಟಳು. ರಾಮೇಶ್ವರನಿಗೆ ಅದು ಗೊತ್ತಿಲ್ಲ.

ಮಾರನೆಯದಿನ ರಾಮೇಶ್ವರನು ಹೆಂಡತಿಯ ಸಂಗಡ ಆಲೋಚಿಸಿ, ತನ್ನ ಸ್ವಂತ ಗ್ರಾಮವನ್ನು ಬಿಟ್ಟು ಭಾತಪುರಗ್ರಾಮಕ್ಕೆ ಕುಟುಂಬ ಸಮೇತನಾಗಿ ಹೋದನು. ಈ ಗ್ರಾಮವು ಅವನ ಜನ್ಮಭೂಮಿಯಿಂದ ಎರಡು ದಿನಗಳ ಪಯಣ. ಇಲ್ಲಿ ಅವನನ್ನು ಗುರುತುಕಂಡವರು ಯಾರೂ ಇರಲಿಲ್ಲವಾಗಿ ಅವನು ಮನಸ್ಸಿನಲ್ಲಿ, ಇಲ್ಲಿ ತಾನು ಉಗ್ರ ಕ್ಷತ್ರಿಯನೆಂದು ಹೇಳಿಕೊಂಡು ಇತರ ಜನರ ಹಾಗೆ ಕಸಿಕಷ್ಟ ಅಥವಾ ಕೂಲಿಯಿಂದ ಜೀವನ ನಿರ್ವಾಹಮಾಡಿಕೊಳ್ಳಬಹುದೆಂದು ಯೋಚಿಸಿಕೊಂಡನು. ಪಾರ್ವತಿಯೂ ತಾನು ಯಾವ ಮನೆಯಲ್ಲಾದರೂ ದಾಸಿಯವೃತ್ತವನ್ನು ಮಾಡಲೊಪ್ಪಿಕೊಂಡಳು. ಇಬ್ಬರೂ ಹೀಗೆ ಆಲೋಚಿಸಿಕೊಂಡು ತಮ್ಮ ಸ್ವಂತ ಊರಿನಲ್ಲಿದ್ದ ಮನೆಯನ್ನು ಮಾರಿದ್ದ ಹಣದಿಂದ ಆ ಊರಿನಲ್ಲಿ ಒಂದು ಗುಡಿಸಲನ್ನು ಕಟ್ಟಿಕೊಂಡರು. ಆದರೆ ಅಲ್ಲಿ ಅವನನ್ನು ಯಾರೂ ಅರಿತಿರಲಿಲ್ಲವಾದುದರಿಂದ ಅವನ ಅದೃಷ್ಟಕ್ಕೆ ಕೂಲಿಯೂ ಕೂಡ ಸಿಕ್ಕದೆ ಹೋಯಿತು. ಎಲ್ಲಿ ಹೋದರೂ ಅಲ್ಲಿ ಜಾಮೀನು ಕೊಡಬೇಕೆಂದು ಹೇಳುತಿದ್ದರು. ಅಪರಿಚಿತನಾದವನಿಗೆ ಜಾಮೀನು ಆಗುವವರು ಯಾರು? ಮನೆಯನ್ನು ಮಾರಿ ತಂದಿದ್ದ ಹಣವೆಲ್ಲಾ ಮುಗಿಯುತ ಬಂದಿತು. ಈ ಅವಸ್ಥೆಯಲ್ಲಿ ರಾಮೇಶ್ವರನು ಒಂದು ದಿನ ಗ್ರಾಮದ ನಾಯಬನ ಬಳಿಗೆ ಹೋಗಿ ತನ್ನ ಬಡತನವನ್ನು ಹೇಳಿಕೊಂಡು ಒಂದು ಪೇದೆಯ ಕೆಲಸವನ್ನು ಕೊಡಬೇಕೆಂದು ಬೇಡಿದನು. ನಾಯಬನು, ಈಗ ಆ ಕೆಲಸವಾವುದೂ ಇಲ್ಲ. ಆದರೆ ದುಡ್ಡು ಬರುವುದಕ್ಕೆ ಒಂದು ಮಾರ್ಗವಿದೆ; ನಿನ್ನ ಹೆಂಡತಿಯು ನಮ್ಮ ಮನೆಗೆ ನೆನ್ನೆ ಬಂದಿದ್ದಳು, ಅದನ್ನು ಕುರಿತು ಅವಳಿಗೆ ತಿಳಿಸಿದೆನು. ಅವಳು ಕೇಳಿ ಬಹಳ

ಕೋಪಗೊಂಡಳು. ನೀನೂ ಅದಕ್ಕೊಪ್ಪುವಹಾಗಿಲ್ಲವೆಂದು ತೋರುತ್ತದೆ. ಆ ಕೆಲಸವೆಲ್ಲಾ ನಿನ್ನಿಂದ ಆಗುವಹಾಗೂ ಇಲ್ಲ. ಅದುಕಾರಣ ಅದನ್ನು ನಿನಗೆ ಹೇಳುವುದೂ ವ್ಯರ್ಥವೆಂದು ಕಾಣುತ್ತದೆ ಎಂದನು.

ರಾಮೇಶ್ವರನು ಇದನ್ನು ಕೇಳಿ, ಹೊಟ್ಟೆಗೋಸ್ಕರ ಏನುಬೇಕಾದರೂ ಮಾಡಬಲ್ಲೆನು. ಯಾವುದೂ ಅಸಾಧ್ಯವಿಲ್ಲ. ಹೆಂಗಸರ ಅಭಿಪ್ರಾಯವು ಎಲ್ಲಾ ವಿಷಯದಲ್ಲಿಯೂ ಗ್ರಾಹ್ಯವಾಗುವುದಿಲ್ಲವಾದಕಾರಣ ತಾವು ಹೇಳೋಣಾಗಲಿ, ನಾನು ಯೋಚಿಸಿನೋಡುತ್ತೇನೆಂದನು.

ನಾಯಬ—ನೀನು ಕೇಳಿರಬಹುದು. ಈಗ ಎರಡು ತಿಂಗಳ ಹಿಂದೆ ಈ ಗ್ರಾಮದಲ್ಲಿ ಒಂದು ಸ್ತ್ರೀಹತ್ಯೆಯಾಯಿತು. ಆದರೆ ಯಾರು ಆ ಕೃತ್ಯವನ್ನು ನಡಿಸಿದರೋ ಇನ್ನೂ ಗೊತ್ತಾಗಿ ತಿಳಿಯಲಿಲ್ಲ. ಇನಸ್ಪೆಕ್ಟರನೂ ಬಹಳ ವಿಚಾರಣೆ ಮಾಡಿದನು. ನಾನೂ ಬಹಳ ಪ್ರಯತ್ನ ಪಟ್ಟು ನೋಡಿದೆನು. ಆದರೆ ಕೃತಕಾರ್ಯನಾಗಲಿಲ್ಲ. ಕೃತ್ಯವನ್ನು ನಡೆಸಿದ ಅಪರಾಧಿಯನ್ನು ಕಂಡು ಹಿಡಿಯದೆ ಹೋದುದಕ್ಕಾಗಿ ಮೇಜಸ್ಟ್ರೇಟರು ಖತಿಗೊಂಡು, ನಾವು ಅಶ್ರದ್ಧೆ ನಡಿಸಿದ್ದೇವೆಂದು ಜಮೀನುದಾರರಿಗೆ ದಂಡವನ್ನು ವಿಧಿಸಿದ್ದಾರೆ. ಈಗ ಈಚೆಗೆ ಈ ಗ್ರಾಮದಲ್ಲಿ ಮತ್ತೊಂದು ಕಳವು ಕೃತ್ಯವು ನಡೆದಿದೆ. ಅದೂ ಇನ್ನೂ ಪತ್ತೆಯಾಗಿಲ್ಲ. ಇನಸ್ಪೆಕ್ಟರಿಗೆ ಒಬ್ಬನ ಮೇಲೆ ಗುಮಾನಿಯುಂಟಾಗಿದೆ. ಆದರೆ ಆ ಮನುಷ್ಯನೂ ಊರು ಬಿಟ್ಟು ಓಡಿಹೋಗಿದ್ದಾನೆ. ಅವನು ಇನ್ನೂ ಸಿಕ್ಕಿಲ್ಲ. ಸಿಕ್ಕುವ ಹಾಗೂ ಇಲ್ಲ. ಶೀಘ್ರವಾಗಿ ಒಬ್ಬ ಅಪರಾಧಿಯನ್ನು ಮೇಜಸ್ಟ್ರೇಟರವರ ಮುಂದೆ ಕಳುಹಿಸದ್ದರೆ ಪುನಃ ಜಮೀನುದಾರನಿಗೆ ಶಿಕ್ಷೆಯಾಗುವುದು ಅಥವಾ ಜಮೀನದಾರಿಯೇ ಹೋದರೂ ಹೋಗಬಹುದು. ಆದುದರಿಂದ ಒಬ್ಬ ಅಪರಾಧಿಯನ್ನು ಹೊಂದಿಸಿ ಕಳುಹಿಸಬೇಕಾದುದು ಬಹಳ ಆವಶ್ಯಕವಾಗಿ ಬಂದು ಒದಗಿದೆ. ಅಪರಾಧಿಯಾಗಲೊಪ್ಪುವವನಿಗೆ ವಿಶೇಷ ಭಯವೇನೂ ಇಲ್ಲ. ಕೇವಲ ಒಂದೆರಡು ಕಂಚು ತಾಮ್ರ ಪಾತ್ರೆಗಳು ಕಳವಾದ ಮೊಕದ್ದಮೆಯಾಗಿದೆ. ಇದಕ್ಕೋಸ್ಕರ ಹೆಚ್ಚು ಶಿಕ್ಷೆಯಾದರೂ ಒಂದು ತಿಂಗಳು ಕಾಲಕ್ಕಿಂತಲೂ ಹೆಚ್ಚು ಕಾರಾಗಾರವಾಸವಾಗಲಾರದು. ಕಾರ್ಯಾಂತರದ ಮೇಲೆ ವಿದೇಶಕ್ಕೆ ಹೋಗಬೇಕಾಗಿ ಬಂದರೆ ಒಂದು ತಿಂಗಳಿಗಿಂತಲೂ ಹೆಚ್ಚು ಕಾಲ ಹೆಂಡತಿ ಮಕ್ಕಳನ್ನು ಬಿಟ್ಟು ಹೋಗುತ್ತೇವೆ. ಇದೂ ಹಾಗೆಯೆ. ಅದಲ್ಲದೆ ವಿದೇಶಕ್ಕೆ ಹೋಗಿ

ಒಂದು ತಿಂಗಳು ಕಷ್ಟಪಟ್ಟು ಸಂಪಾದಿಸುವುದಕ್ಕೆ ಹತ್ತರಷ್ಟು ಇದರಲ್ಲಿ ಸಂಪಾದನೆಯಾಗುವ ಸಂಭವವುಂಟು. ಜಮೀನದಾರರು, ಯಾರು ಅಪರಾಧಿಯಾಗಿ ಹೋಗಿ ನಿಲ್ಲುವನೋ ಅವನಿಗೆ ಐವತ್ತು ರೂಪಾಯಿಗಳನ್ನು ರೊಕ್ಕವಾಗಿ ಕೊಡುವುದಾಗಿ ಹೇಳಿದ್ದಾರೆ. ಅದುಕಾರಣ ಲಾಭ ಸಂಪಾದಿಸುವುದಕ್ಕೆ ಇದೊಂದು ಮಾರ್ಗವಿದೆ. ಮತ್ತು ನೀನು ಜೈಲಿನಿಂದ ಬಿಡುಗಡೆಯಾಗಿ ಬಂದ ಕೂಡಲೆ ನಿನಗೆ ಜಮೀನುದಾರಿಯಲ್ಲಿ ಯಾವುದಾದರೂ ಸರಿಯಾದ ಕೆಲಸವು ಕೊಡಲ್ಪಡುವುದು.

ನಾಯಬನ ಈ ಪ್ರಸ್ತಾಪವನ್ನು ಕೇಳಿ ಮೊದಲು ತಾನು ನಡೆಸಿದ್ದ ಕಳುವಿನ ಕೃತ್ಯವು ನೆನಪಿಗೆ ಬಂದು ನಡುಗಿ ಮನಸ್ಸಿನಲ್ಲಿ, ವಿಧಾತನು ನಿಜವಾಗಿಯೂ ನನ್ನ ಹಣೆಯಲ್ಲಿ ಕಾರಾಗಾರವಾಸವನ್ನು ಬರೆದಿರಬೇಕು. ಇಲ್ಲದಿದ್ದರೆ ನಾನು ಆ ದಿನ ಚಿಲ್ಲರೆ ದುಡ್ಡನ್ನು ಕಳವು ಮಾಡುತಿರಲಿಲ್ಲ. ಆ ಪಾಪಕ್ಕೋಸ್ಕರ ನಾನು ಅದರ ಫಲವನ್ನು ಒಂದು ದಿನವಾದರೂ ಅನುಭವವಿಸಲೇ ಬೇಕು. ಅದಕ್ಕೆ ಒಂದೆರಡು ದಿನಗಳು ಹಿಂದುಮುಂದಾದರೇನು? ನಾನಾಗಿಯೇ ಜೈಲಿಗೆ ಹೋಗಿ ಅಲ್ಲಿದ್ದುಬಿಟ್ಟು ಆ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಕೂಡದೇತಕ್ಕೆ? ನಾನಾಗಿಯೇ ಈ ಪ್ರಾಯಶ್ಚಿತ್ತ ಮಾಡಿಕೊಂಡುಬಿಟ್ಟರೆ ದೇವರು ಪ್ರಸನ್ನನಾಗಲಾರನೆ? ಹೇಗಾದರೂ ಆಗಲಿ, ಈಗ ಒದಗಿರುವ ಅನ್ನಾಭಾವನಿವಾರಣೆಗೆ ಇದಕ್ಕಿಂತಲೂ ಬೇರೆ ಉಪಾಯ ಯಾವುದೂ ತೋರುವುದಿಲ್ಲವೆಂದೆಂದುಕೊಂಡನು.

ಹೀಗೆಲ್ಲಾ ಯೋಚಿಸಿ, ರಾಮೇಶ್ವರನು ಎದ್ದು ನಿಂತುಕೊಂಡು, ನನಗೆ ಸಮ್ಮತ, ನನಗೆ ಮೊದಲು ಐವತ್ತು ರೂಪಾಯಿ ಕೊಡೋಣಾಗಲಿ ಎಂದನು. ನಾಯಬನು ಕೂಡಲೆ ರೂಪಾಯಿಗಳನ್ನು ಕೊಟ್ಟು, ಇನ್ನೊಂದು ಮಾತು ಹೇಳತಕ್ಕದ್ದಿದೆ, ಜೈಲಿಗೆ ಹೋಗಿ ಮೇಜಸ್ಟ್ರೇಟ್ ಸಾಹೇಬರಲ್ಲಿ ಈ ಕಳವನ್ನೊಪ್ಪಿಕೊಳ್ಳಬೇಕು. ಹಾಗೆ ಒಪ್ಪಿಕೊಳ್ಳದೆ ಹೋದರೆ ನಾವು ಸುಳ್ಳು ಸಾಕ್ಷಿ ಏರ್ಪಾಡು ಮಾಡಿದವರೆಂದು ನಮ್ಮ ಮೇಲೆ ವ್ಯವಹರಿಸುವರು ಎಂದು ಹೇಳಿದನು.

ರಾಮೇಶ್ವರನು ನಾಯಬನ ಕೊಟಡಿಯಲ್ಲಿ ಆಗಲೆಂದು ಹೇಳುತ್ತ ಹೊರಟುಹೋದನು. ಮನೆಗೆ ಬಂದು ಐವತ್ತು ರೂಪಾಯಿಗಳನ್ನು ಎಣಿಸಿ ಹೆಂಡತಿಯ ಕೈಯಲ್ಲಿ ಕೊಟ್ಟನು. ಪಾರ್ವತಿಯು ರೂಪಾಯಿಗಳನ್ನು ಕೈಯಲ್ಲಿ ತೆಗೆದುಕೊಂಡು, ಇದೆಲ್ಲಿಂದ ತಂದಿರಿ ಎಂದು ಕೇಳಿದಳು. ರಾಮೇಶ್ವರನು ಸಮಾಚಾರಗಳನ್ನೆಲ್ಲಾ ವಿವರವಾಗಿ ಹೇಳಿದನು.

ಪಾರ್ವತಿಯು ಅದನ್ನೆಲ್ಲಾ ಕೇಳಿದ ಕೂಡಲೆ ರೂಪಾಯಿಗಳನ್ನು ಒತ್ತಟ್ಟಿಟ್ಟು ಗಂಡನ ಪಾದಗಳೆರಡನ್ನೂ ಕೈಯಿಂದ ಹಿಡಿದುಕೊಂಡು ಊರ್ಧ್ವಮುಖಿಯಾಗಿ ಸಜಲನಯನಳಾಗಿ, ಇಂತಹ ಕೆಲಸವನ್ನು ಯಾವಾಗಲೂ ಮಾಡಬೇಡ, ಹಾಳು ದುಡ್ಡಿಗೋಸ್ಕರ ಆಶೆಪಟ್ಟು ಅಪರಾಧಿಯಾಗಬೇಡ, ನಾನು ಭಿಕ್ಷೆಯನ್ನು ಬೇಡಿ ತಂದು ಹೊಟ್ಟೆಗೆ ಹಾಕುತ್ತೇನೆ. ನೀನು ಇಂತಹ ಕೆಲಸವನ್ನು ಮಾಡಬೇಡ. ಈ ಕಾಣದ ಊರಿನಲ್ಲಿ ನನ್ನನ್ನು ಬಿಟ್ಟು ಹೋಗಬೇಡ. ನನ್ನ ವಿಚಾರವು ಹಾಗಿರಲಿ, ಅದನ್ನು ಕುರಿತು ಚಿಂತಿಸಬೇಡ. ಮಗುವನ್ನು ನೋಡು. ಮಗುವಿಗೆ ಮತ್ತಾರಿದ್ದಾರೆ? ಮಗುವಿಗೆ ಸ್ವಲ್ಪ ತಲೆನೋವು ಮೂಗುನೋವು ಆದರೆ ನಾನೆಲ್ಲಿಗೆ ಹೋಗಲಿ, ಯಾರಮನೆಯ ಬಾಗಲಿಗೆ ಹೋಗಿ ನಿಂತುಕೊಳ್ಳಲಿ? ಎಂದು ಮುಂತಾಗಿ ಹೇಳುತ ಪತಿಯ ವಕ್ಷದಲ್ಲಿ ಮುಖವನ್ನು ಔಚಿಕೊಂಡು ಅಜಸ್ರವಾಗಿ ಅಶ್ರುವರ್ಷಣ ಮಾಡಿದಳು. ಈ ಸಮಯದಲ್ಲಿ ಮಗುವು ಬೀದಿಯಲ್ಲಿ ಕೆಸರಿನಲ್ಲಿ ಆಡುತಿದ್ದಿತು. ತಾಯಿಯ ರೋದನಧ್ವನಿಯು ಅದರ ಕಿವಿಗೆ ಬೀಳಲು, ಮಗುವು ಕಳವಳ ಪಟ್ಟುಕೊಂಡು ಕೈಯಲ್ಲಿದ್ದ ಕೆಸರನ್ನು ಮೈಗೆ ಒರಸಿಕೊಳ್ಳುತ್ತ ಬಂದು ಇಬ್ಬರ ಮುಖವನ್ನೂ ನೋಡಲಾರಂಭಿಸಿತು. ಕಡೆಗೆ ಅಪ್ಪಾ! ನೀನು ಅಮ್ಮನನ್ನು ಹೊಡೆದೆಯಾ? ಎಂದು ಹೇಳುತ್ತಾ ತಾಯಿಯ ಮೈಮೇಲೆ ಬಿದ್ದು ಅವಳ ಮುಖ ಚುಂಬನ ಮಾಡಿ, ಅಳಬೇಡ! ಅಪ್ಪನನ್ನು ಹೊಡೆಯುತ್ತೇನೆಂದು ಹೇಳಿತು. ಪಾರ್ವತಿಯು ಎಲ್ಲಾ ಮರೆತುಬಿಟ್ಟಳು. ಮಗುವನ್ನು ಕಂಕುಳಲ್ಲೆತ್ತಿಕೊಂಡು ಅವರನ್ನು ಮೊದಲು ಹೊಡಿ ಎಂದಳು; ಮಗುವು ಕಂಕುಳಲ್ಲಿದ್ದುಕೊಂಡು ಕೈಚಾಚಿ, ಇದೋ ಹೊಡೆದೆ ಎಂದು ತಂದೆಯ ಬೆನ್ನಿನ ಮೇಲೆ ಒಂದು ಪೆಟ್ಟನ್ನು ಹೊಡೆಯಿತು. ಪುನಃ ತಾಯಿಯ ಕುತ್ತಿಗೆಗೆ ಕೈಹಾಕಿ ಅವಳ ಮುಖದ ಮೇಲೆ ಮುಖವನ್ನಿಟ್ಟಿತು. ಪಾರ್ವತಿಯು, ಇನ್ನೂ ಹೊಡಿ ಎಂದು ಹೇಳಿಕೊಡುತಿದ್ದಳು. ಮಗುವು ಪುನಃ ಹೊಡಿಯುತ್ತೇನೆಂದು ಹೇಳಿ ಕೋಮಲವಾದ ಅಮೃತಲೇಪನವಾದ ಕೈಯನ್ನು ತಂದೆಯ ಬೆನ್ನಿನ ಮೇಲೆ ಹಾಕಿತು. ಈ ಪ್ರಕಾರ ಆ ಪವಿತ್ರವಾದ ಸುಖದಲ್ಲಿ ಸ್ವಲ್ಪ ಹೊತ್ತು ಕಳೆದ ಮೇಲೆ ರಾಮೇಶ್ವರನು ಹೋಗಿ ರೂಪಾಯಿಗಳನ್ನು ಆರಿಸಿ ಒಟ್ಟು ಮಾಡಿ ಹಾಸಿಗೆಯ ಮೇಲೆ ಇಟ್ಟು ಹೊರಟುಹೋದನು. ಪಾರ್ವತಿಯು ಮಗುವನ್ನು ಎತ್ತಿಕೊಂಡು ಬೇರೆ ಮನಸ್ಸಿನಲ್ಲಿದ್ದುಬಿಟ್ಟಳು.

*

ರಾಮೇಶ್ವರನು ನಾಯಬನ ಬಳಿಗೆ ಹೋಗಿ, ಸ್ವಾಮಿ! ನಾನು ಹೋಗುತ್ತೇನೆ, ಇನ್ನು ಹೆಚ್ಚು ವಿಳಂಬ ಬೇಡ, ವಿಳಂಬವಾದರೆ ಹೋಗುವುದಕ್ಕೆ ವಿಘ್ನ ವುಂಟಾದೀತೆಂದು ತೋರುತದೆ. ಹೆಂಗಸು ಕಾತರಳಾಗಿರುವುದನ್ನು ಮತ್ತೊಂದು ತಡವೆ ನಾನು ನೋಡಿಬಿಟ್ಟರೆ ನನ್ನ ಬುದ್ಧಿಯು ನನ್ನ ಕೈಲಿರದು; ಅದುಕಾರಣ ಈಗ ದೃಢವಾದ ಪ್ರತಿಜ್ಞೆಯುಳ್ಳವನಾಗಿದ್ದೇನೆ. ಜಾಗ್ರತೆ ಮಾಡಿರಿ ಎಂದನು.. ನಾಯಬನು ವ್ಯಸ್ತನಾಗಿ ಇನಸ್ಪೆಕ್ಟರಿಗೆ ಸಮಾಚಾರವನ್ನು ಕಳುಹಿಸಿದನು ಒಂದು ಘಂಟೆಯೊಳಗೆ ಜವಾನರು ಬಂದು ರಾಮೇಶ್ವರನನ್ನು ಸುತ್ತಿಹಾಕಿ ಕೊಂಡು ಬಹಳ ಬೆದರಿಕೆಯೊಡನೆ ಠಾಣೆಗೆ ಕರೆದುಕೊಂಡು ಹೋದರು. ಪುನಃ ಅವನು ಹೆಂಡತಿ ಮತ್ತು ಮಗುವನ್ನು ನೋಡವುದಕ್ಕೆ ಬರಲಿಲ್ಲ.

ಆಗ ಮೊದಲು ರಾಮೇಶ್ವರನಿಗೆ ತಾನು ಜೈಲಿಗೆ ಹೋಗುತ್ತೇನೆಂದು ಸ್ಮರಣೆಗೆ ಬಂದಿತು! ಜೈಲು! ಎಲ್ಲಿ ಬ್ರಹ್ಮಘ್ನ, ಸ್ತ್ರೀಘ್ನ ಮುಂತಾದ ಪಾಪಾತ್ಮರು ಇರುತ್ತಾರೋ ಆ ಸ್ಥಳ—ಎಲ್ಲಿ ಡಕಾಯತಿ ಮಾಡಿದವರು, ದರೋಡೆ ಕಳ್ಳರು, ಜನರ ಧನ ಅಸುಗಳನ್ನು ಸುಲಿಯುವ ಥಗ್ಗಿ ಕಳ್ಳರು ಪರಸ್ಪರ ಸ್ನೇಹಿತರಾಗಿರುವರೋ ಆ ಜೈಲು! ಎಲ್ಲಿ ಮನುಷ್ಯರನ್ನು ದನಗಳ ಹಾಗೆ ಕೂಡಿಸಿ ಗೋತುಸರಪಣಿ ಹಾಕಿ ಕಟ್ಟಿಹಾಕುತ್ತಾರೋ ಆ ಜೈಲು! ಎಲ್ಲಿ ಜಾತಿಯಿಲ್ಲವೋ ಬ್ರಾಹ್ಮಣ ಮುಸಲ್ಮಾನ ಚಂಡಾಲರೆಲ್ಲರೂ ಒಂದೇ ಪಙ್ತಿಯಲ್ಲಿ ಕೂತು ಊಟಮಾಡುತ್ತಾರೋ ಆ ಜೈಲು! ಮಾದಿಗ ಹೊಲೆಯರ ಸಂಗಡ ಮಲುಗುವ ಜೈಲು! ಎಲ್ಲಿ ವಿಚಾರವಿಲ್ಲವೋ, ವಿಚಾರಕ್ಕೆ ಪ್ರತಿಯಾಗಿ ವೇತ್ರಾಘಾತವೇ ಹೆಚ್ಚೋ ಆ ಜೈಲು! ಏನು ಅಪರಾಧ ಮಾಡಿದುದಕ್ಕೆ ಇಂತಹ ಜೈಲಿಗೆ ಹೋಗುತ್ತೇನೆ? ಅಪರಾಧವೇನು? ಹೊಟ್ಟೆಗೆ ಇಲ್ಲದೆ ಅಪರಾಧ! ಹೆಂಡತಿ ಮಕ್ಕಳು ಅನ್ನವಿಲ್ಲದೆ ಸಾಯುವುದನ್ನು ಸಹಿಸಲಾರದ ಅಪರಾಧ! ಇದೇ ಅಪರಾಧ—ಹೀಗೆಲ್ಲಾ ಮನಸ್ಸಿಗೆ ಹೊಳೆಯಿತು.

ಈ ಸಮಯದಲ್ಲಿ ಶೂನ್ಯಮಾರ್ಗವನ್ನು ಭೇದಿಸಿಕೊಂಡು ಪುಷ್ಪ ವಿಶಿಷ್ಟವಾದ ವೃಕ್ಷಲತೆ ಶಾಖೆ ಪತ್ರ ಮತ್ತು ಗ್ರಾಮ್ಯಪ್ರದೇಶಗಳನ್ನು ಕಂಪಾಯಮಾನ ಮಾಡುವ ತೀವ್ರವಾದ ಕರುಣಾ ಪರಿಪೂರ್ಣವಾದ ಮರ್ಮಭೇದಿಯಾದ ರೋದ ಸಧ್ವನಿಯು ರಾಮೇಶ್ವರನ ಕಿವಿಗೆ ಬಿದ್ದಿತು. ಅವನು ಹಿಂದಿರುಗಿ ನೋಡಿದನು. ನೋಡಲಾಗಿ ಪಾರ್ವತಿಯು ರುದ್ಧವಾದ ಶ್ವಾಸದಿಂದೋಡಿಬರುತ್ತಾಳೆ. ಅಳುತ್ತ,

ಸ್ವಲ್ಪ ನಿಲ್ಲು ! ನಿನ್ನನ್ನು ನೋಡುತ್ತೇನೆ ಎಂದು ಕೂಗುತ್ತಾಳೆ. ರಾಮೇಶ್ವರನು ಇನ್ನು ತಾಳಲಾರದೆ ಹೋದನು. ಹಿಂದಿರುಗಿ ನಿಂತುಕೊಂಡನು. ಬ್ರಾಹ್ಮಣಿಯು ಹತ್ತಿರ ಓಡಿಬರಲೆತ್ನಿಸಿದಳು. ಆದರೆ ಜವಾನರು ಬಿಡಲಿಲ್ಲ. ಗದ್ದುತ ಹೊಡೆಯುತ ತಳ್ಳಿಕೊಂಡು ಹೋದರು. ರಾಮೇಶ್ವರನು ಮತ್ತೊಂದುಸಲ ಹಿಂದಿರುಗಿ ನೋಡಿದನು. ಆಗ ಕೆಲವು ಗ್ರಾಮದ ರೈತರು ಬಂದು ಪಾರ್ವತಿಯನ್ನು ಹಿಡಿದು ನಿಲ್ಲಿಸಿಕೊಂಡಿದ್ದರು, ಪಾರ್ವತಿಯು ನೆಲದಮೇಲೆ ಬಿದ್ದು ಉರುಳಾಡುತ್ತಾಳೆ. ಕೇಶರಾಶಿ ಎಲ್ಲಾ ಧೂಳಿಯಲ್ಲಿ ಧೂಸರಿತವಾಗಿದೆ. ರಾಮೇಶ್ವರನಿಗೆ ಪುನಃ ಕಣ್ಣಿಗೆ ಬೀಳಲಿಲ್ಲ, ಕ್ರಮೇಣ ಆ ಸ್ಥಳವು ದೂರವಾಗುತ ಬಂದಿತು, ಗಾಳಿಯೊಂದಿಗೆ ಹೆಂಡತಿಯ ರೋದನ ಧ್ವನಿಯು ಮಧ್ಯೆ ಮಧ್ಯೆ ಬರುತಲಿದ್ದಿತು. ಆಗ ಅವನ ಬುದ್ಧಿಗೆ ಸಾಗರವು ಉಛಲಿತವಾಗುತ, ಜಗತ್ತೇ ರೋದನಮಾಡುತ್ತದೆಂದು ತೋರುತಲಿದ್ದಿತು.

---

## ಎರಡನೆಯ ಪರಿಚ್ಛೇದ.

ಪೋಲೀಸಿನವರು ರಾಮೇಶ್ವರನನ್ನು ಕರೆದುಕೊಂಡು ಹೊರಟುಹೋದ ಮೇಲೆ, ರಾತ್ರಿ ಊಟವಾದ ನಂತರ ಇನಸ್ಪೆಕ್ಟರನೂ ನಾಯಬನೂ ಏಕತ್ರ ಕುಳಿತುಕೊಂಡು ಮಾತನಾಡುತಲಿದ್ದರು. ಈ ಸಮಯದಲ್ಲಿ ಒಬ್ಬ ದಾಸಿಯು ಬಂದು, ರಾಮೇಶ್ವರನ ಹೆಂಡತಿಯು ಸ್ವಲ್ಪ ಶಾಂತಳಾಗಿರುವುದಾಗಿಯೂ, ಪತಿ ವಿರಹಯಾತನೆಯನ್ನು ಸಹಿಸಲಾರದವಳಾಗಿಯೂ ಮಗುವನ್ನು ಮಲಗಿಸಿಬಿಟ್ಟು ತಾನು ಶಯನಮಾಡಿಕೊಂಡು ಮೆಲ್ಲಮೆಲ್ಲನೆ ಅಳುತ್ತಾಳೆಂತಲೂ ವರ್ತಮಾನವನ್ನು ಹೇಳಿದಳು.

ನಾಯಬ—ನಾವು ಈ ದಿನ ಅವಳ ಜತೆಯಲ್ಲಿರಬೇಕೆಂದು ಗೊತ್ತುಮಾಡಿದ್ದ ಹೆಂಗಸು ಇನ್ನೂ ಅಲ್ಲಿಗೆ ಬಂದಿರಲಿಲ್ಲವೆ ?

ದಾಸಿ—ಅವಳು ಅಲ್ಲಿಯೇ ಇದ್ದಾಳೆ. ನಾನೂ ಇದುವರೆಗೂ ಅಲ್ಲಿಯೇ ಇದ್ದೆ. ಈಗತಾನೇ ಹೊರಟುಬಂದೆ.

ದಾಸಿಯು ಈ ಮಾತನ್ನು ಹೇಳಿ ಹೊರಟುಹೋದಮೇಲೆ ಇನಸ್ಪೆಕ್ಟರನು ನಾನು ಕೇಳಿದುದರಲ್ಲಿ ಆಸಾಮಿಯು ಓಡಿಹೋಗುವ ಪ್ರಯತ್ನವನ್ನು ಮಾಡುತ

ಲಿದ್ದಾನೆಂದು ತಿಳಿಯಬಂದಿತು. ಒಂದುವೇಳೆ ಹೋಗದಿದ್ದರೂ ಮೇಜಸ್ಟ್ರೇಟರ ಮುಂದೆ ತಪ್ಪನ್ನು ಒಪ್ಪಿಕೊಳ್ಳುವ ಹಾಗೆ ತೋರುವುದಿಲ್ಲವೆನೆದು ಹೇಳಿದನು.

ನಾಯಬ—ಹಾಗಾದರೆ ಉಪಾಯ ?

ಇನಸ್ಪೆಕ್ಟರ್—ಆಸಾಮಿಯು ಒಪ್ಪಿಕೊಳ್ಳದಿದ್ದರೆ ಬೇರೆ ರುಜುವಾತುಗಳನ್ನು ಒದಗಿಸಬೇಕು. ಅವನ ಮನೆಯಲ್ಲಿ ಕಳವು ಮಾಲುಗಳು ಸಿಕ್ಕಿದಹಾಗೆ ಮಾಡಬೇಕು. ಅದಕ್ಕೋಸ್ಕರ ಮಧ್ಯಾಹ್ನಕ್ಕೆ ಪೂರ್ವದಲ್ಲಿಯೇ ಕೆಲವು ಮಾಲುಗಳನ್ನು ತೆಗೆದುಕೊಂಡು ಹೋಗಿ ಅವನ ಮನೆಯಲ್ಲಿ ಹುಗಿದಿಡಬೇಕು. ಇಲ್ಲವಾದರೆ ಅವನ ಮನೆಯ ಅಟ್ಟದಮೇಲೆ ಒಂದು ಮೂಲೆಯಲ್ಲಿಟ್ಟು ಬರಬೇಕು. ನೀವು ಈಗಲೇ ಒಂದು ಕೊಡಪಾನೆಯನ್ನು ತೆಗೆದುಕೊಂಡು ಹೋಗಿ ಅವನ ಹೆಂಡತಿಯ ಸಮ್ಮತಿಯಿಂದ ಅದನ್ನು ಅಲ್ಲಿಟ್ಟು ಬರಬೇಕು.

ನಾಯಬ—ಈ ಹೊತ್ತು ಆಗಲೇ ರಾತ್ರಿಯಾಯಿತು. ನಾಳೆ ಬೆಳಿಗ್ಗೆ ಮಾಡುತ್ತೇನೆ.

ಇನಸ್ಪೆಕ್ಟರ್—ಅದಾಗಲಾರದು. ಬೆಳಿಗ್ಗೆ ಯಾರಾದರೂ ಕಂಡರೆ ಎಲ್ಲಾ ಹೊರಗಾಗಿ ಎಲ್ಲರೂ ಕಂಡುಬಿಡುತ್ತಾರೆ. ಅದುಕಾರಣ ನೀವು ಈಗಲೇ ಹೋಗಬೇಕು. ನಾಯಬನು ಯತ್ನವಿಲ್ಲದೆ ಒಪ್ಪಿಕೊಂಡನು

ರಾಮೇಶ್ವರನ ಅದೃಷ್ಟಶೃಂಖಲವು ತುಂಡುತುಂಡಾಗುತ್ತ ಸಂಕೋಚವಾದ ಅವನ ಗ್ರಹಚಾರವು ನಾಲ್ಕು ದಿಕ್ಕುಗಳಿಂದಲೂ ಮೊರೆದು ಮುಸುಗುಟ್ಟುತ ಬಂದಿತು. ಅವನು ಗಂಭೀರವಾದ ರಾತ್ರಿಯಲ್ಲಿ ಪೊಲೀಸಿನವರ ಪಹರೆಯಿಂದ ತಪ್ಪಿಸಿಕೊಂಡು ಓಡಿಹೋದನು. ಯಾರಾದರೂ ಕಂಡು ಪುನಃ ಹಿಡಿದ ಕೊಂಡು ಹೋದಾರೆಂಬ ಭಯದಿಂದ ಯಾರಿಗೂ ಕಾಣಿಸಿಕೊಳ್ಳದ ಹಾಗೆ ಬಂದು ತನ್ನ ಮನೆಯ ಪಾರ್ಶ್ವದಲ್ಲಿದ್ದ ಒಂದು ಮರದ ಪಕ್ಕದಲ್ಲಿ ನಿಂತುಕೊಂಡು ನಾಲ್ಕು ಕಡೆಯಲ್ಲಿಯೂ ನೋಡುತಲಿದ್ದನು. ಈ ಸಮಯದಲ್ಲಿ ಪೂರ್ವದಿಕ್ಕಿನಿಂದ ಒಬ್ಬ ಮನುಷ್ಯನು ಬರುತಲಿದ್ದನು. ಅವನನ್ನು ಕಂಡು ರಾಮೇಶ್ವರನು ಮತ್ತಷ್ಟು ಮರೆಯಾಗಿ ನಿಂತು ಆಪಾದಮಸ್ತಕವನ್ನೂ ದೃಷ್ಟಿಸಿ ನೋಡುತಲಿದ್ದನು. ಅವನು ಸಮೀಪಕ್ಕೆ ಬಂದಹಾಗೆಲ್ಲಾ ಅವನ ಗುರುತು ಸ್ಪಷ್ಟವಾಗುತ ಬಂದಿತು. ಅವನು ನಾಯುಬನಾಗಿದ್ದನು. ರಾಮೇಶ್ವರನು ಮನಸ್ಸಿನಲ್ಲಿ, ಈಗ ನಾಯುಬನ ಬಳಿಗೆ ಹೋಗಿ ಅವನ ಕಾಲು ಹಿಡಿದುಕೊಂಡು ಅವನ ರೂಪಾಯಿ

ಗಳನ್ನು ಹಿಂದಿರುಗಿ ಕೊಟ್ಟುಬಿಡುವೆನು. ಹೆಂಗಸಿನ ಸುಖಸಾಧನ ನಿಮಿತ್ತವಾಗಿ ಈ ಕೆಲಸವನ್ನು ಮಾಡಲು ಪ್ರವೃತ್ತನಾದೆನು. ಆದರೆ ಇದರಿಂದ ಅವಳಿಗೆ ಕಷ್ಟ ಬೋಧೆಯಾದರೆ ಇನ್ನು ರೂಪಾಯಿಗಳಿಂದ ಪ್ರಯೋಜನವೇನು ? ಎಂದು ಆಲೋಚಿಸುತ್ತಿರಲಾಗಿ, ನಾಯಬನು ರಾಮೇಶ್ವರನ ಮನೆಯ ಬಾಗಿಲಿನಲ್ಲಿ ಬಂದು ನಿಂತನು. ಪಾರ್ವತಿಯು ಆಗಲೂ ಮೆಲ್ಲಮೆಲ್ಲನೆ ಅಳುತಿದ್ದಳು. ನೆರೆಯವರು, ಎಲೆ ತಾಯಿ ಸ್ವಲ್ಪ ನಿದ್ರೆಹೋಗು, ಇಲ್ಲದಿದ್ದರೆ ಲಘುವು ತಪ್ಪಿ ಲಂಪಟಕ್ಕೊಳಗಾಗುವೆಯೆಂದು ಕೂಗಿದರು. ಹೀಗೆ ಹೇಳುತ್ತಲೇ ಪಾರ್ವತಿಯು ಮತ್ತಷ್ಟು ಗಟ್ಟಿಯಾಗಿ ಅಳುವುದಕ್ಕೆ ತೊಡಗಿದಳು. ಬಾಗಿಲಿನಲ್ಲಿ ನಿಂತಿದ್ದ ನಾಯಬನು ಒಳಗಣ ರೋದನಧ್ವನಿಯನ್ನು ಕೇಳಿ, ತಾಯಿ ! ಸ್ವಲ್ಪ ಬಾಗಿಲು ತೆರೆ, ನಿನ್ನ ಸ್ವಾಮಿಯ ಸಮಾಚಾರವನ್ನು ತಂದಿದ್ದೇನೆಂದನು. ವೃಕ್ಷಾಂತರಾಳದಲ್ಲಿ ನಿಂತಿದ್ದ ರಾಮೇಶ್ವರನಿಗೆ ಇದಾವಮಾತೂ ಕೇಳಿಸದು. ಪಾರ್ವತಿಯ ಅನುಚ್ಚವಾದ ರೋದನಶಬ್ದವೂ ಕೇಳಿಸದು. ಪಾರ್ವತಿಯು ನಾಯಬನ ಮಾತನ್ನು ಕೇಳುತ್ತಲೇ ಬೇಗನೆ ಬಂದು ಬಾಗಿಲನ್ನು ತೆರೆದಳು. ಒಳ್ಳೆಯದು ಕೆಟ್ಟದ್ದು ಆವುದನ್ನೂ ಯೋಚಿಸಲಿಲ್ಲ. ನಾಯಬನು ಗೃಹದೊಳಗೆ ಪ್ರವೇಶ ಮಾಡಿ, ಹೇಳುವುದು ಬಹಳವಿದೆ; ಮೊದಲು ಬಾಗಿಲನ್ನು ಮುಚ್ಚಿಕೊಂಡು ಒಳಗಣ ಅಗಣಿಯನ್ನು ಹಾಕು. ಇಲ್ಲದಿದ್ದರೆ ಯಾರಾದರೂ ಕೇಳುವರು ಎಂದನು. ರಾಮೇಶ್ವರನು ದೂರದಿಂದ ನೋಡಿದುದರಲ್ಲಿ ನಾಯಬನು ಬಂದು ಬಾಗಿಲನಲ್ಲಿ ನಿಂತು ಬಾಗಿಲನ್ನು ತಟ್ಟಿ ಪಾರ್ವತಿಯನ್ನು ಕೂಗಿ ಒಂದೆರಡು ಅಸ್ಫುಟವಾದ ಮಾತುಗಳನ್ನಾಡಿದನೆಂದು ಕಂಡು ಬಂದು ಅವನ ನಿಶ್ವಾಸವು ಖರತರವಾಗುತ ಬಂದಿತು. ಮತ್ತು ನೋಡುತಿದ್ದಹಾಗೆ ಕೂಡಲೆ ಪಾರ್ವತಿಯು ಬಾಗಿಲನ್ನು ತೆರೆದಳು. ನಾಯಬನು ಒಳಗೆ ಪ್ರವೇಶಮಾಡಿದನು. ರಾಮೇಶ್ವರನು ಇನ್ನು ತಿಳಿಯಬೇಕಾದುದುಳಿಯಲಿಲ್ಲವೆಂದು ತಿಳಿದುಕೊಂಡು ಇದಕ್ಕೋಸ್ಕರ ನಾಯಬನು ಉಪಾಯಮಾಡಿ ನನ್ನನ್ನು ಇನಸ್ಪೆಕ್ಟರನ ವಶಕ್ಕೆ ಕೊಟ್ಟನು. ಇದಕ್ಕೆ ತಕ್ಕ ಪ್ರತಿಫಲ ಮಾಡುತ್ತೇನೆಂದಂದುಕೊಂಡು ಬಾಗಿಲನ ಹತ್ತಿರ ಬಂದು ನಿಂತುಕೊಂಡನು. —ಒಳಗೆ ಅವರವರು ಮಾತನಾಡುವ ಶಬ್ದವು ಕೇಳಸಿತು. ಒಂದುಸಲ ಅವರ ಮಾತನ್ನು ಕೇಳಬೇಕೆಂದು ಯೋಚಿಸಿದನು. ಅನಂತರ ತನ್ನ ಮೇಲೆ ತಾನೇ ಕೋಪಿಸಿಕೊಂಡು ಬಾಗಿಲಿಗೆ ಕಾಲಿನಿಂದ ಒಂದು ಒದೆಯನ್ನು

ಕೊಟ್ಟನು. ಮನೆಯೊಳಗೆ ಮಾತನಾಡುವ ಶಬ್ದವು ಅಡಗಿತು. ಆಗವನು ಮರ್ಮಾಂತಿಕವಾದ ಯಾತನೆಯಿಂದ ಒಂದು ಪ್ರಕಾರವಾದ ಕ್ರುದ್ಧಸ್ವರದಿಂದ, ನಾನು ಬಂದಿದ್ದೇನೆ-ನೀನು ಯಾರಿಗೋಸ್ಕರ ಅಳುತಲಿದ್ದೆಯೋ ಆ ನಾನು ಬಂದಿದ್ದೇನೆ-ನಿನ್ನ ಉಪಪತಿಯು ನಿನ್ನ ಮನೆಯೊಳಗೆ ಇದ್ದಾನೆ. ಈಗ ನಾನು ಹೊರಟೆ ಎಂದು ಹೇಳಿದನು. ಪಾರ್ವತಿಯು ಈ ಧ್ವನಿಯನ್ನು ಕೇಳಿದಳು. ಆಹ್ಲಾದದಿಂದ ಮಾತಿನ ಅರ್ಥವಾಗಲಿಲ್ಲ. ಉನ್ಮತ್ತಳಾಗಿ ಮನೆಯಿಂದ ಹೊರ ಗಾದಳು. ಹೊರಗೆ ಬಂದು ಪ್ರೇಮಪೂರಿತವಾದ ಸ್ವರದಿಂದ ಕೂಗಲಾರಂಭಿಸಿ ದಳು. ರಾಮೇಶ್ವರನು ವಿಸ್ಮಿತನಾದನು. ಪುನಃ ಏನೂ ಹೇಳದೆ ಹೊರಟು ಹೋದನು. ಪಾರ್ವತಿಯು ಬಾಗಿಲನ್ನು ತೆರೆದು ಸ್ವಾಮಿಯನ್ನು ನೋಡದೆ, ಕೂಗಿ ಕೂಗಿ ಉತ್ತರಬಾರದೆ ಕಡೆಗೆ ಅಳುವುದಕ್ಕೆ ತೊಡಗಿದಳು.

ರಾಮೇಶ್ವರನು ಪುನಃ ಏನೊಂದುತ್ತರವನ್ನೂ ಕೊಡದೆ, ಇತರರಿಗೆ ನಾನೇ ತಕ್ಕೆ ಕಷ್ಟಕೊಡಲಿ. ಅದರಿಂದ ನಾನೇತಕ್ಕೆ ಕಷ್ಟಕ್ಕೊಳಗಾಗಲಿ. ಈ ಘೃಣಿತ ವಾದ ಪೃಥಿವಿಯನ್ನು ತ್ಯಜಿಸಿಬಿಡುತ್ತೇನೆಂದು ಸಿದ್ಧಾಂತ ಮಾಡಿಕೊಳ್ಳುತ ಹೊರಟುಹೋದನು. ಅಪರಾಹ್ನದಲ್ಲಿ ಯಾವ ರೋದನಧ್ವನಿಯು ಮರ್ಮಭೇದಿ ಯಾದುದೆಂದು ಬೋಧೆಯಾಗಿದ್ದಿತೋ ಆ ಶಬ್ದವು ಈಗ ಪೈಶಾಚಿಕ ಶಬ್ದವಾಗಿ ಬೋಧೆಯಾಗಲಾರಂಭಿಸಿತು.

ರಾಮೇಶ್ವರನು ಸ್ವಲ್ಪದೂರ ಹೋಗಲಾಗಿ ಪೊಲೀಸಿನವರು ಹಿಂದಿರುಗಿ ಬರುತಲಿದ್ದರು. ಅವನು ಅವರೆದುರಿಗೆ ಹೋಗಿ ನಿಂತುಕೊಂಡು, ನನ್ನನ್ನು ದಸ್ತಗಿರಿ ಮಾಡಿರಿ: ಅದಕ್ಕೋಸ್ಕರ ಬಂದಿದ್ದೇನೆಂದನು. ರಾಮೇಶ್ವರನ ಮೂರ್ತಿ ಯನ್ನು ನೋಡಿ ಎಲ್ಲರೂ ಭಯಪಟ್ಟರು. ಯಾರಿಗೂ ಅವನನ್ನು ಹಿಡಿಯಲು ಧೈರ್ಯವುಂಟಾಗಲಿಲ್ಲ ಅವನು, ಹೆಂಡತಿಯನ್ನು ನೋಡಲು ಬಹಳ ಇಷ್ಟವಿ ದ್ದಿತು, ಅದಕ್ಕೋಸ್ಕರ ಹೋಗಿದ್ದೆನು. ಈಗ ನಡೆಯಿರಿ, ನಿಮಗೆ ಭಯವಿಲ್ಲ. ನಾನಾಗಿಯೇ ಬಂದು ನಿಮ್ಮ ಕೈಗೆ ಸಿಕ್ಕಿರುತ್ತೇನೆ. ಅದುಕಾರಣ ನಿಮ್ಮ ಇನ ಸ್ಪೆಕ್ಟರು ನನಗೆ ವಾರಂಟು ಕೊಟ್ಟಿದ್ದಾನೆ. ನಾನಾಗಿಯೇ ಸ್ವಂತವಾಗಿ ಬರ ಲೊಪ್ಪದಿದ್ದರೆ ನನ್ನನ್ನು ಹಿಡಿಯಲು ಯಾರಿಗೂ ಸಾಧ್ಯವಿಲ್ಲ. ಆ ದಿನ ನಾನು ಖೂನಿ ಮಾಡಿದ್ದೆ. ನಾನಾಗಿಯೇ ಸಿಕ್ಕದುದರಿಂದ ನಾನು ಯಾರಿಗೂ ಸಿಕ್ಕ ಲಿಲ್ಲವೆಂದನು.

ಇದನ್ನು ಕೇಳಿ ಜಮಾದಾರನು ಕೇವಲ ಆತುರದಿಂದ, ಆ ಖೂನಿಯನ್ನು ಮಾಡಿದವನು ನೀನೆಯೆ? ಎಂದು ಕೇಳಿದನು. ರಾಮೇಶ್ವರನು, ಹೌದು, ನಾನೇ ಆ ಖೂನಿಯನ್ನು ಮಾಡಿದವನೆಂದನು.

ಜಮಾದಾರ—ಇದನ್ನು ನೀನು ಕೋರ್ಟಿನಲ್ಲಿ ಕಬೂಲಿಮಾಡುತ್ತೀಯಾ?

ರಾಮೇಶ್ವರ—ಆಗತ್ಯವಾಗಿ ಒಪ್ಪಿಕೊಳ್ಳುತ್ತೇನೆ. ಯಾರ ಭಯವೂ ಇಲ್ಲ.

ಪುನಃ ಯಾರೂ ಏನೊಂದು ಮಾತನ್ನೂ ಆಡದೆ ಎಲ್ಲರೂ ಅವನ ಸಂಗಡ ಹೋದರು.



ಮಾರನೆಯ ದಿನ ಮೇಜಸ್ಟ್ರೇಟ್ ಸಾಹೇಬರ ಮುಂದೆ ಕರತರಲ್ಪಟ್ಟವನಾಗಿ ರಾಮೇಶ್ವರನು ಎದುರಿಗೆ ನಿಂತುಕೊಂಡನು. ಮೇಜಸ್ಟ್ರೇಟನು ಅವನ ಆಪಾದಮಸ್ತಕವನ್ನೂ ನೋಡಿ, ಇವನೇ ಆ ಖೂನಿ ಕಬೂಲಿ ಕೈದಿ? ಎಂದನು.

ರಾಮೇಶ್ವರನು, ಹೌದು ಎಂದು ಸಲಾಂ ಮಾಡಿದನು.

ಆಗ ಅವನ ಅಂತರಿಕವಾದ ಯಾತನೆಯು ಬಹಳ ಗುರುತರವಾಗಿ ಎದ್ದಿದ್ದಿತು. ಹೇಗಾದರೂ ಮಾಡಿ ಈ ದೇಹವನ್ನು ತ್ಯಾಗಮಾಡಬೇಕೆಂದು ತಾನು ಖೂನಿ ಮಾಡಿದವನೆಂದು ಹೇಳಿಕೊಂಡನು, ಜಮಾದಾರನು ಬೇಕಾದ ಇತರ ಸಾಕ್ಷ್ಯವನ್ನೆ ಏರ್ಪಾಡು ಮಾಡಿದ್ದನು. ರಾಮೇಶ್ವರನು ಸೆಷನಿಗೆ ಕಮ್ಮಿಟಾಗಿ ಅಲ್ಲಿ ವಿಚಾರವಾದುದರಲ್ಲಿ ಅವನಿಗೆ ಯಾವಜ್ಜೀವವೂ ದ್ವೀಪಾಂತರ ವಾಸದ ದಂಡನೆಯಾಯಿತು. ಕೆಲವು ದಿನಗಳಮೇಲೆ ಮೇಲಿನ ಕೋರ್ಟಿನಲ್ಲಿ ಶಿಕ್ಷೆಯು ಕಡಿಮೆಯಾಯಿತು. ಆಗ ಪೀನಲ್‌ಕೋಡು ಇರಲಿಲ್ಲ. ರಾಮೇಶ್ವರನು ಇಪ್ಪತ್ತು ವರುಷಕಾಲ ದ್ವೀಪಾಂತರದಲ್ಲಿರಲು ಹೊರಟುಹೋದನು.

ಇತ್ತಲಾಗಿ ಪಾರ್ವತಿಯು ಒಂದು ತಡವೆ ಮಾತ್ರ ಸ್ವಾಮಿಯ ಕಂಠಧ್ವನಿಯನ್ನು ಕೇಳಿ ಪುನಃ ಏನೊಂದುತ್ತರವನ್ನೂ ಕೇಳದೆ ಉನ್ಮಾದಿನಿಯಹಾಗೆ ಅವನನ್ನು ವನವನದಲ್ಲಿ ಹುಡುಕುತ್ತ ಹೋದಳು, ಎಲ್ಲಿಯೂ ಗಂಡನನ್ನು ನೋಡಲಿಲ್ಲ ಎಷ್ಟೋ ಕೂಗಿದಳು. ಉತ್ತರವಿಲ್ಲ. ಎಷ್ಟೋ ಅತ್ತಳು. ಯಾರೂ ಅವಳನ್ನು ಸಮಾಧಾನ ಮಾಡಲಿಲ್ಲ. ಕಡೆಗೆ ಹೋಗಿ ಪದ್ಮಾನದಿಯ ತೀರದಲ್ಲಿ ನಿಂತುಕೊಂಡು ಯೋಚಿಸುತಿದ್ದಳು. ಆಗ ಹಠಾತ್ತಾಗಿ ರಾಮೇಶ್ವರನು ಹೊರಟುಹೋಗುವಾಗ ಹೇಳಿದ ಮಾತುಗಳಲ್ಲಿ ಒಂದು ನಿಷ್ಠುರವಾದ, ಅತಿ ಭಯಂಕರವಾದ ಮಾತನ್ನು ಕೇಳಿದ್ದಹಾಗೆ ಜ್ಞಾಪಕಕ್ಕೆ ಬಂದಿತು. ಪಾರ್ವತಿಯು

ಆಗ ಆನಂದದಿಂದ ಅದನ್ನು ಕಿವಿಗೆ ಹಾಕಿಕೊಂಡಿರಲಿಲ್ಲ. ಆಗ ಅವನ ಮಾತಿನ ಅರ್ಥವೂ ಗೊತ್ತಾಗಲಿಲ್ಲ. ಈಗ ಆ ಮಾತು ನೆನಪಿಗೆ ಬಂದಿತು ಆಗ ರಾಮೇಶ್ವರನು ಏತಕ್ಕೆ ಓಡಿಹೋದನೆಂಬುದು ಈಗ ಗೊತ್ತಾಯಿತು. ಎದೆ ಸೀಳಿ ಹೋಗುವಹಾಗೆ ಬೋಧೆಯಾಯಿತು. ಪುನಃ ಸ್ವಾಮಿಯ ದರ್ಶನವಾಗಲಾರದೆಂದೂ ಗೊತ್ತಾಯಿತು. ಆಗವಳ ಕಣ್ಣಿಗೆ ಆಕಾಶ, ನಕ್ಷತ್ರ, ಜಲ ಎಲ್ಲವೂ ಅಂಧಕಾರವಾಗಿ ಕವಿತುಕೊಂಡಿತು. ನದಿಯ ನೀರಿನಲ್ಲಿ ಒಂದು ಶಬ್ದವಾಯಿತು, ನೀರಿನಲ್ಲಿ ಅಲೆಯೆದ್ದಿತು. ಕ್ರಮವಾಗಿ ಎಲ್ಲಾ ಸೇರಿಹೋಯಿತು. ಕಡೆಗೆ ಎಲ್ಲಾ ನಿಸ್ತಬ್ಧವಾಯಿತು. ಪಾರ್ವತಿಯು ನಿಂತಿದ್ದ ಸ್ಥಳದಲ್ಲಿರಲಿಲ್ಲ. ಪಾರ್ವತಿಯು ಜಲಮಗ್ನವಾಗಿ ಹೋದಳು,

## ಮೂರನೆಯ ಪರಿಚ್ಛೇದ.

ಆ ಘೋರನಾದಿಯಾದ ಸಮುದ್ರದ ಅನಂತವಾದ ವಜ್ರಗಂಭೀರವಾದ ಕಲ್ಲೋಲ ಧ್ವನಿಯನ್ನು ಕೇಳುತ ಕೇಳುತ ಇಪ್ಪತ್ತು ವರುಷಗಳಾಗಿ ಹೋದುವು. ಆ ಮರಳುಮಯವಾದ ಉಪಕೂಲದಲ್ಲಿ ನಿಂತಿದ್ದ ನಾರಿಕೇಳವೃಕ್ಷದ ಸಂಕೀರ್ಣವಾದ ಛಾಯೆಯಲ್ಲಿ ಕೊಡಲಿಯನ್ನು ಕೈಯಲ್ಲಿ ಹಿಡಿದುಕೊಂಡು ವಿಶ್ರಾಮ ತೆಗೆದುಕೊಳ್ಳುತ್ತ ಇಪ್ಪತ್ತು ವರುಷಗಳಾಗಿ ಹೋದುವು! ಆ ಸಾಗರ ಪ್ರಾಂತ ವ್ಯಾಪಿಯಾದ ನೊರೆಯನ್ನೆರಚುವ ಧೂಮಮಧ್ಯದಲ್ಲಿ ಆನಂದದುಲ್ಲಾಲನ ನಗುಮೊಗವನ್ನು ಹುಡುಕುತ್ತ ಇಪ್ಪತ್ತು ವರುಷಗಳಾಗಿ ಹೋದುವು! ಸ್ವೇಚ್ಛಾಕ್ರಮದಲ್ಲಿ ನಿರ್ವಾಸಿತವಾದ ರಾಮೇಶ್ವರನ ಮನಸ್ಸಿನಲ್ಲಿ ಸಾಯಬೇಕೆಂದು ಆಶೆಯಿದ್ದಿತು—ಸಾಯಲಾರದೆ ಹೋದನು—ಇಪ್ಪತ್ತು ವರುಷಗಳ ಕಾಲ ಯಾತನೆಯನ್ನು ಅನುಭವಿಸುತ ಬಂದನು. ನಾವು ಈಗಲೇ ಮಾಡೋಣವೆಂದು ಯೋಚಿಸುತ್ತೇವೆ. ಮತ್ತೊಬ್ಬನು ಈಗ ಬೇಡವೆಂದು ಹೇಳುತ್ತಿರುವನು. ನಮ್ಮ ಕಾರ್ಯವು ದೃಷ್ಟವಾದುದು. ಅವನ ಕಾರ್ಯವು ಅದೃಷ್ಟವಾದುದು.

ರಾಮೇಶ್ವರನು ತನ್ನ ವಿಶ್ವಾಸಘಾತಿನಿಯನ್ನು ಸ್ಮರಿಸಿಕೊಂಡು, ಸಾಯಬೇಕೆಂದು ಆಲೋಚಿಸಿಕೊಂಡಾಗ ಆನಂದದುಲ್ಲಾಲನ ಸ್ಮರಣೆಯು ಬರುತಿರಲಿಲ್ಲ.

ಈಗ ಹಗಲೂ ರಾತ್ರಿ ಆ ನಿರ್ವಾಸಿತವಾದ ವಾಸದ್ವೀಪದಲ್ಲಿ ಆನಂದದುಲ್ಲಾಲನ ಅಕೃತ್ರಿಮವಾದ ಸರಳವಾದ ನಗುಮೊಗವು, ಅವನ ತೊದಲ್ಮಾತು, ಅವನ ಆಟ ಮುಂತಾದುದೆಲ್ಲಾ ನೆನಪಿಗೆ ಬರಲಾರಂಭವಾಯಿತು. ಸಮುದ್ರವು ಶಾಂತವಾಗಿ ಶಬ್ದವಾದಾಗ ರಾಮೇಶ್ವರನು ಆನಂದದುಲ್ಲಾಲನು ಮಾತನಾಡುತ್ತಾನೆಂದು ತಿಳಿಯುವನು. ದೂರದಲ್ಲಿ ಅಸ್ಪಷ್ಟವಾಗಿ ಕಾಣುವ ಒಂದು ತರಂಗವು ಎದ್ದು ಕುಣಿದಾಗ ಆನಂದದುಲ್ಲಾಲನು ಕುಣಿಯುತ್ತಾನೆಂದು ತಿಳಿಯುವನು. ರಾಮೇಶ್ವರನು ತಾನು ಇಪ್ಪತ್ತು ವರುಷ ಕಾಲ ಬದುಕಿರಲಾರನೆಂದು ತಿಳಿದುಕೊಂಡಿದ್ದನು. ಆದರೆ ಇಪ್ಪತ್ತು ವರುಷ ಬದುಕಿಕೊಂಡನು. ನಿರ್ವಾಸಿತಕಾಲವು ಪೂರ್ತಿಯಾಗುತಲೆ ಸ್ವದೇಶಕ್ಕೆ ಹಿಂದಿರುಗಿ ಬಂದನು. ಭಾತಿಪುರಕ್ಕೆ ಬಂದು ನೋಡಲಾಗಿ, ಅಲ್ಲಿ ಅವನ ಕುಟೀರವಿರಲಿಲ್ಲ, ಅವನ ಹೆಂಡತಿಯೂ ಇರಲಿಲ್ಲ. ಆನಂದದುಲ್ಲಾಲನು ಎಲ್ಲಿಯೋ ಗೊತ್ತೇ ಇಲ್ಲ. ಅವನ ಸಮಾಚಾರವನ್ನು ಹೇಳುವವರೇ ಇಲ್ಲ. ರಾಮೇಶ್ವರನೋ ! ರಾಮೇಶ್ವರನು ಯಾರೊ ? ರಾಮೇಶ್ವರನನ್ನು ಯಾರೂ ಅರಿಯರು.

ರಾಮೇಶ್ವರನು ಮಗನಿಗೋಸ್ಕರ ಕೆಲವು ದಿನಗಳು ಹುಚ್ಚನಹಾಗೆ ಅಲೆದನು. ಒಂದು ದಿನ ಅವನು ಸಂತೆಗೆ ಹೋಗುವ ದಾರಿಯಲ್ಲಿ ಕುಳಿತುಕೊಂಡು ಈ ದಿನ ಮಗನು ಸಂತೆಗೆ ಹೋಗುವುದಕ್ಕೆ ಬರುವನೆಂದು ಇದಿರುನೋಡುತಿದ್ದನು. ದಾರಿಯಲ್ಲಿ ಹೋಗುವ ಯುವಕರಾದವರನ್ನೆಲ್ಲಾ ಅತೃಪ್ತವಾದ ಲೋಚನಗಳಿಂದ ನೋಡುತಲಿದ್ದನು. ಇದ್ದಕ್ಕಿದ್ದಹಾಗೆ ಒಬ್ಬ ಹೆಂಗಸನ್ನು ನೋಡಿ ಮೈಯೆಲ್ಲಾ ನಡುಗಿತು. ಆ ಹೆಂಗಸು ವೇಶ್ಯಳೆಂದು ಬೋಧೆಯಾಯಿತು. ಅವಳ ಆಕಾರವನ್ನು ನೋಡಿ ರಾಮೇಶ್ವರನು ಅವಳು ಪಾರ್ವತಿಯೆಂದು ತಿಳಿದನು. ರಾಮೇಶ್ವರನು ದ್ವೀಪಾಂತರಕ್ಕೆ ಹೋದಾಗ ಪಾರ್ವತಿಗೆ ಇಪ್ಪತ್ತು ವರುಷ, ಈಗ ನಾಲ್ವತ್ತು ವರುಷವಾಗಿರಬೇಕು. ಹೆಂಗಸಿಗೂ ಅದೇ ವರುಷ ಕಂಡಿತು. ಇಪ್ಪತ್ತು ವರುಷ ವಯಸ್ಸಿನಲ್ಲಿ ನೋಡಿದವಳನ್ನು ನಾಲ್ವತ್ತು ವರುಷ ವಯಸ್ಸಿನಲ್ಲಿ ನೋಡಿದರೆ ಸುಲಭವಾಗಿ ಗುರುತಿಸಲು ಕಷ್ಟ. ರಾಮೇಶ್ವರನು ಯಾವ ಪಾರ್ವತಿಯನ್ನು ತ್ಯಜಿಸಿ ಹೋಗಿಬಿಟ್ಟಿದ್ದನೋ ವಾಸ್ತವಿಕವಾಗಿ ಇವಳು ಆ ಪಾರ್ವತಿಯಲ್ಲ. ಆದರೆ ರಾಮೇಶ್ವರನು ಯಾವ ವೈಸಾದೃಶ್ಯವನ್ನು ನೋಡಿದನೋ ಅದು ವಯಸ್ಸಿನ ಪರಿವರ್ತನದಿಂದುಂಟಾದುದೆಂದು ತಿಳಿದುಕೊಂಡನು.

ವೇಶ್ಯಳು ರಕ್ತವರ್ಣವುಳ್ಳ ವಸ್ತ್ರವನ್ನುಟ್ಟು ಶುಷ್ಕವಾದ ವನಪುಷ್ಪಮಾಲೆಯನ್ನು ಧರಿಸಿ ತಂಬಾಕುವನ್ನು ಮೆಲ್ಲುತ್ತ ಒಬ್ಬ ಮುಸಲ್ಮಾನರವನ ಸಂಗಡ ಮಾತನಾಡುತಲಿದ್ದಳು. ನೋಡಿದ ಕೂಡಲೇ ರಾಮೇಶ್ವರನು ಅವಳ ಹತ್ತಿರ ಹೋಗಿ ಗಂಭೀರಭಾವದಿಂದ, ನನ್ನ ಮಗನೆಲ್ಲಿ ? ಎಂದು ಕೇಳಿದನು. ವೇಶ್ಯಳು ಆಕಾಶಮುಖಿಯಾಗಿ ನಕ್ಕು, ನಿನ್ನ ಮಗನಾರು? ಎಂದು ಕೇಳಿದಳು.

ರಾಮೇಶ್ವರ—ಆನಂದದುಲ್ಲಾಲ.

ಸಟೇ—ಸತ್ತಿರಬೇಕು. ನಿನಗೆ ಇನ್ನೂ ಕುತ್ತಿಗೆಗೆ ಹಗ್ಗ ಬೀಳಲಿಲ್ಲವೆ?

ರಾಮೇಶ್ವರ—ಜಾಗ್ರತೆಯಾಗಿ ಬೀಳುವುದು. ಈಗ ಹೇಳು; ಆನಂದದುಲ್ಲಾಲನನ್ನು ಎಲ್ಲಿಗೆ ಕಳುಹಿಸಿದೆ ?

ವೇಶ್ಯ—ಸುಡುಗಾಡಿಗೆ. ನದಿಯಲ್ಲಿ ಅವನನ್ನು ಹುಗಿದು ಬಂದೆ. ಅವನಿಗೆ ದೊಡ್ಡರೋಗವು ತಗುಲಿದ್ದಿತು. ಅವನು ಹೋದ ; ನೀನೂ ಅವನಿರುವ ಕಡೆಗೆ ಹೋಗು.

ರಾಮೇಶ್ವರನು ಇನ್ನು ತಡೆಯಲಾರದೆ ಹೋದನು. ಅವಳ ಎದೆಗೆ ಬಲವಾಗಿ ಒಂದು ಒದೆಯನ್ನು ಕೊಟ್ಟು ಹೊರಟುಹೋದನು.

ಹೋದನೆಲ್ಲಿಗೆ? ಎಲ್ಲಿಗೆ ಹೋಗುತಲಿದ್ದನೋ ಅದು ಅವನಿಗೇ ಗೊತ್ತಿಲ್ಲ ದ್ವೀಪಾಂತರದಲ್ಲಿ ಕುಳಿತುಕೊಂಡು ಈ ಪುತ್ರನ ಮುಖವನ್ನು ಭಾವಿಸಿಕೊಳ್ಳುತಲಿದ್ದನು. ಆ ಮುಖವನ್ನು ಯಾವಾಗ ಕಂಡೇನೆಂಬ ಆಸೆಯಿಂದ ತದ್ದಂವಾಗಿ ಏಕಾಗ್ರಮನಸ್ಕನಾಗಿ ಧ್ಯಾನಿಸುತಲಿದ್ದನು. ಅವನಿಗೆ ಈ ಆಶೆಯು ಈ ಪೃಥಿವಿಯಲ್ಲಿ ಏಕಮಾತ್ರ ಗ್ರಂಥಿಯಾಗಿದ್ದಿತು. ಈಗ ಆ ಗ್ರಂಥಿಯು ಹರಿದುಹೋಯಿತು. ಈಗ ಮತ್ತೆಲ್ಲಿಗೆ ಹೋದಾನು ? ಆದರೂ ಹೊರಟುಹೋದನು.

ಹಾದಿಯಲ್ಲಿ ಹೋಗುತ ಮತ್ತೊಬ್ಬ ಹೆಂಗಸು ಒಂದು ಮಗುವನ್ನು ಎತ್ತಿಕೊಂಡು ಹೋಗುತಲಿದ್ದುದನ್ನು ಕಂಡನು. ರಾಮೇಶ್ವರನು ಇದ್ದಕ್ಕಿದ್ದಹಾಗೆ ಅವಳ ಕಪಾಲಕ್ಕೆ ಒಂದು ಪೆಟ್ಟನ್ನು ಕೊಟ್ಟು ಅವಳ ಕಂಕುಳಿನಿಂದ ಮಗುವನ್ನು ಎತ್ತಿಕೊಂಡು ನೆಲದಮೇಲೆ ಕುಳ್ಳಿರಿಸಿದನು. ಹೆಂಗಸು ಗಟ್ಟಿಯಾಗಿ ಅಳುವುದಕ್ಕೆ ತೊಡಗಿದಳು. ರಾಮೇಶ್ವರನು ಕೋಪಭರಿತನಾಗಿ, ನೀನು ರಾಕ್ಷಸಿಯ ಜಾತಿಯವಳು. ಮಗುವನ್ನು ಕೊಂದುಹಾಕಿಬಿಡುವೆ, ಮಗುವನ್ನು ಬಿಟ್ಟು ಹೋಗೆಂದನು.

ರಾಮೇಶ್ವರನು ಹಗಲೆಲ್ಲಾ ಬೀದಿ ಬೀದಿ ಅಡವಿಅಡವಿಯಲ್ಲಿ ಅಳುತ ಅಲೆಯುತಲಿದ್ದನು. ರಾತ್ರಿ ಹಸಿವಿನಿಂದ ಪೀಡಿತನಾದನು. ಎದುರಿಗೆ ಒಂದು ಅಂಗಡಿಯಿದ್ದಿತು. ಅಂಗಡಿಯವನು ತಡಿಕೆಯನ್ನು ಮುಚ್ಚಿ ಮಲಗಿದ್ದನು. ರಾಮೇಶ್ವರನು ತಡಿಕೆಯನ್ನು ಕಿತ್ತು ಹರಿದು ಬಿಸಾಟು ಒಳಗೆ ಹೋಗಿ ಸಿಕ್ಕಿದುದನ್ನು ತಿನ್ನುವುದಕ್ಕೆ ಪ್ರಾರಂಭಿಸಿದನು. ಅಂಗಡಿಯವನು ಎಚ್ಚರವಾಗಿ ಎದ್ದು ಬೈಯುವುದಕ್ಕೆ ತೊಡಗಿದನು. ರಾಮೇಶ್ವರನು ಅಂಗಡಿಯವನನ್ನು ಕತ್ತು ಹಿಡಿದು ಹೊರಕ್ಕೆ ತಳ್ಳಿಬಿಟ್ಟನು.

ಅಂಗಡಿಯವನು ಸ್ಟೇಷನಿಗೆ ಹೋಗಿ ಒಬ್ಬ ಪೊಲೀಸಿನವನನ್ನು ಕರೆತಂದನು. ರಾಮೇಶ್ವರನು ಪೊಲೀಸಿನವನ ಸೋಟಾವನ್ನು ಕಿತ್ತುಕೊಂಡು ಅವನ ತಲೆಗೆ ಹೊಡೆದನು. ಪೊಲೀಸಿನವನ ತಲೆಯು ಒಡೆಯಿತು.

ಕೂಡಲೆ ಪ್ರಚಾರವಾಯಿತೇನೆಂದರೆ:—ಒಬ್ಬ ಪ್ರಸಿದ್ಧನಾದ ಬಂಕೋಲ ಬೈಟಾಗಿದ್ದ ಕೈದಿಯು ಪಿಲೋಪಿನಾಂಗನಿಂದ ತಪ್ಪಿಸಿಕೊಂಡು ಬಂದು ಅಲ್ಲಲ್ಲಿ ಬಂಚಾಳಿಸುತ್ತ ದೇಶವನ್ನೆಲ್ಲಾ ಲೂಟಿಮಾಡುತ್ತಾನೆಂದೂ, ಸಿಕ್ಕಿದವರನ್ನು ಹೊಡೆದುಹಾಕುತ್ತಾನೆಂದೂ ಸುದ್ದಿಯೆದ್ದು ಎಲ್ಲೆಲ್ಲಿಯೂ ಹರಡಿಕೊಂಡಿತು. ಪೊಲೀಸಿನವರು ಮೊದಲಹಾಗೆ ವ್ಯಸ್ತರಾದರು. ಮೇಜಿಸ್ಟ್ರೇಟು ರಾಮೇಶ್ವರನನ್ನು ಹಿಡಿದು ತಂದವರಿಗೆ ಇನ್ನೂರು ರೂಪಾಯಿ ಇನಾಮು ಕೊಡಿಸುವುದಾಗಿ ಇಸ್ತಿಹಾರನ್ನು ಪ್ರಸಿದ್ಧಪಡಿಸಿದನು. ರಾಮೇಶ್ವರನು ಕೆಲವು ದಿನ ಅಲ್ಲಲ್ಲಿ ಸಿಕ್ಕಿದುದನ್ನು ಲೂಟಿಮಾಡುತ್ತ ಸಿಕ್ಕಿದವರನ್ನು ಹೊಡೆಯುತ್ತ ಅರಣ್ಯದಲ್ಲಿ ಔತುಕೊಂಡು ಕಾಲಹರಣ ಮಾಡಿದನು. ಅಲ್ಲಲ್ಲಿದ್ದ ಕೆಟ್ಟ ಜನರೂ ಡಕಾಯಿತರೂ ಅವನ ಪ್ರತಾಪವನ್ನು ಕೇಳಿ, ಅವನೊಂದಿಗೆ ಸೇರಿಕೊಂಡರು. ಆಗ ರಾಮೇಶ್ವರನು ಡಕಾಯಿತರಿಗೆಲ್ಲಾ ಸರದಾರನಾಗಿ ಮನುಷ್ಯಜಾತಿಯಮೇಲೆ ಭಯಂಕರವಾದ ದೌರಾತ್ಮ್ಯವನ್ನು ನಡೆಸುತಲಿದ್ದನು. ಯಾರೂ ಅವನನ್ನು ಹಿಡಿಯಲಾರರು. ಆದರೆ ಒಂದು ತಡವೆ ಮುಕ್ಕಾಲುಪಾಲು ಸಿಕ್ಕಿಬಿದ್ದಿದ್ದನು. ಅವನು ತನ್ನ ದಳದವರೊಂದಿಗೆ ಬಹುದೂರದಲ್ಲಿ ಒಂದು ದರೋಡೆಯನ್ನು ಮಾಡುವುದಕ್ಕೆ ಹೋಗಿದ್ದನು. ಮನೆಯವರು ಜಾಗರೂಕರಾಗಿಯೂ ಬಲಿಷ್ಠರಾಗಿಯೂ ಇದ್ದರು. ರಾಮೇಶ್ವರನಿಗೆ ಪೂರಾ ಪೆಟ್ಟು ತಾಗಿ ಅಚೇತನನಾಗಿ ಬಿದ್ದನು. ಅವನ ಜತೆಗಾರರು ಅವನನ್ನು ಎತ್ತಿಕೊಂಡು ಬಂದು ಬೇರೆ ಗ್ರಾಮದ ಒಂದು ಅಡವಿಯಲ್ಲಿ ಹಾಕಿಬಿಟ್ಟು ಹೋದರು.

ಮೂರನೆಯ ದಿನ ಆ ಗ್ರಾಮಸ್ಥರು ತಮ್ಮ ಅಡವಿಯಲ್ಲಿ ಹೀಗೆ ಒಬ್ಬ ಮನುಷ್ಯನು ಮೃತಪ್ರಾಯನಾಗಿ ಪೂರಾ ಪೆಟ್ಟು ಬಿದ್ದು ಬಿದ್ದಿರುವುದನ್ನು ಕಂಡು ಹೆದರಿ ಪೊಲೀಸಿನವರಿಗೆ ವರ್ತಮಾನವನ್ನು ಕೊಡುವುದಕ್ಕೆ ಹೋಗುತಲಿದ್ದರು. ಆ ದಿನ ಒಬ್ಬ ಡಾಕ್ಟರನು ಬೇರೆ ಒಂದು ಗ್ರಾಮದಲ್ಲಿ ಒಬ್ಬ ಧನಾಢ್ಯನಾದ ದೊಡ್ಡಮನುಷ್ಯನಿಗೆ ಚಿಕಿತ್ಸೆಯನ್ನು ಮಾಡಿ ಮಾರ್ಗತ್ವೇನ ಆ ಗ್ರಾಮಕ್ಕೆ ಬಂದಿದ್ದನು. ಆ ಸಮಯದಲ್ಲಿ ಆ ಡಾಕ್ಟರನು, ಇವನು ಸಾಯುವುದರಲ್ಲಿದ್ದಾನೆ, ನಾನಿವನನ್ನು ಮೊದಲು ಚಿಕಿತ್ಸೆ ಮಾಡಿ ಬದುಕಿಸುವೆನು. ಈಗಿವನನ್ನು ಪೊಲೀಸಿನವರು ಕರೆದುಕೊಂಡು ಹೋದರೆ ಇವನು ಸಾಯುವುದೇ ದಿಟ. ನಾನು ವಾಸಿ ಮಾಡಿದಮೇಲೆ ಹೋಗಿ ಪೊಲೀಸಿನವರಿಗೆ ಸಮಾಚಾರವನ್ನು ಕೊಡಿ ಎಂದು ಹೇಳಿದನು. ಗ್ರಾಮಸ್ಥರೆಲ್ಲರೂ ಡಾಕ್ಟರಿನ ಮಾತಿಗೆ ಸಮ್ಮತರಾಗಿ ಪೊಲೀಸಿಗೆ ಸಮಾಚಾರವನ್ನು ಕೊಡಲಿಲ್ಲ. ಡಾಕ್ಟರನು ಶ್ರಮಪಟ್ಟು ಅವನಿಗೆ ಚಿಕಿತ್ಸೆ ಮಾಡಿ ಅವನನ್ನು ಬದುಕಿಸಿದನು. ರಾಮೇಶ್ವರನು ಏಳುವುದಕ್ಕೆ ಶಕ್ತಿಯುಂಟಾಗುತಲೇ ಡಾಕ್ಟರಿನಿಂದ ತಪ್ಪಿಸಿಕೊಂಡು ಹೋಗಿ ಪೊಲೀಸಿನವರಿಂದ ಪಾರಾದನು.

## ನಾಲ್ಕನೆಯ ಪರಿಚ್ಛೇದ.

ರಾಮುಸರದಾರನ ಭಯದಿಂದ ದೇಶವೆಲ್ಲಾ ನಡುಗಲಾರಂಭವಾಯಿತು. ಆದರೆ ರಾಮು, ಆನಂದದುಲ್ಲಾಲನ ಶೋಕವನ್ನು ಮರೆಯಲಿಲ್ಲ. ಮೇಲೆ ಹೇಳಿದ ಘಟನೆಯಾದ ನಾಲ್ಕು ವರುಷಗಳಮೇಲೆ ಒಂದು ದಿನ ರಾಮು ಅಥವಾ ರಾಮೇಶ್ವರನು ಸ್ವಜನರ ದಳಬದ್ಧನಾಗಿ ಒಂದು ದರೋಡೆಯನ್ನು ನಡೆಸಲು ಹೋಗುತಲಿದ್ದನು. ಆಗ ಪ್ರಾಯಶಃ ಸಮರಾತ್ರಿಯಾಗಿದ್ದಿತು. ಪ್ರಾಂತರದಲ್ಲಿಯೂ, ವೃಕ್ಷಾಗ್ರದಲ್ಲಿಯೂ ನದಿಯ ಜಲದಲ್ಲಿಯೂ ಚಂದ್ರಕಿರಣವು ಕಂಪಿಸುತಲಿದ್ದಿತು. ನದಿಯ ತೀರದಲ್ಲಿ ಒಂದು ಪಲ್ಲಕ್ಕಿಯು ಹೋಗುತಲಿದ್ದಿತು. ಪಲ್ಲಕ್ಕಿಯಲ್ಲಿ ಒಬ್ಬ ದೊಡ್ಡಮನುಷ್ಯನು ಹಾಗೆಯೇ ಮಲಗಿಕೊಂಡು ಅನ್ಯಮನಸ್ಕನಾಗಿ ಏನೋ ಯೋಚಿಸಿಕೊಳ್ಳುತಿದ್ದನು. ಗೃಹಿಣಿ, ಕನ್ಯೆ, ಸೊಗಸಾದ ಮನೆ, ಹೊಸ ತೋಟ, ಹೊಸತೋಟಗಾರನ ರಂಗುಕಟ್ಟಿದ ದಾಡಿ, ಅವನ ಹೆಂಡತಿಯ ಮೂಗಿನ

ಮುಕುರ, ಇವೆಲ್ಲಾ ಅವನ ಯೋಚನೆಗೆ ಭಾಗಿಗಳಾಗಿದ್ದುವು. ಹೀಗೆಲ್ಲಾ ಯೋಚಿಸುತಿರಲಾಗಿ ಪಲ್ಲಕ್ಕಿಯು ಹಠಾತ್ತಾಗಿ ಅಲ್ಲಾಡಿತು, ಹೋಗುವುದು ನಿಂತಿತು. ಕೆಳಗೆ ನೆಲದಮೇಲೆ ಕೂತುಬಿಟ್ಟಿತು. ಆ ದೊಡ್ಡಮನುಷ್ಯನು ಪಲ್ಲಕ್ಕಿಯ ಬಾಗಿಲಿನಲ್ಲಿ ಮುಖವನ್ನು ಹೊರಗೆ ಇಟ್ಟು ನೋಡಿದನು. ನಡುಗಲಾರಂಭಿಸಿದನು ನೋಡಲಾಗಿ ಇಪ್ಪತ್ತು ಮೂವತ್ತು ಕತ್ತಿಗಳು ಚಂದ್ರಕಿರಣದಲ್ಲಿ ತಳಕಿದುವು. ಕತ್ತಿಯನ್ನು ಹಿಡಿದಿದ್ದವರು ಗಂಭೀರವಾದ ಭಾವದಿಂದ ಹೆಜ್ಜೆಯನ್ನು ಹಾಕುತ್ತ ಮುಂದಾಗುತಲಿದ್ದರು. ಆ ದೊಡ್ಡಮನುಷ್ಯನಿಗೆ ಎಲ್ಲಾ ಗೊತ್ತಾಯಿತು. ಕಳ್ಳರು ಪಲ್ಲಕ್ಕಿಯ ಬಾಗಿಲಿನ ಹತ್ತಿರ ಬಂದು ನಿಂತು, ಅವರಲ್ಲೊಬ್ಬನು ಕೈನೀಡಿ ಬಾಬುವಿನ ಜುಟ್ಟನ್ನು ಹಿಡಿದು ಹೊರಕ್ಕೆಳೆದನು. ಮತ್ತೊಬ್ಬನು ಕತ್ತಿಯನ್ನು ಮೇಲಕ್ಕೆತ್ತಿ ಅವನ ಕುತ್ತಿಗೆಗೆ ಗುರಿಯಿಟ್ಟು ಹೊಡಿಯುವುದರಲ್ಲಿದ್ದನು. ಈ ಸಮಯದಲ್ಲಿ ರಾಮೇಶ್ವರನು ಆ ಕತ್ತಿಯನ್ನು ಕಿತ್ತುಕೊಂಡು ಬಾಬುವಿನ ಪ್ರಾಣವನ್ನು ರಕ್ಷಿಸಿದನು. ಅನಂತರ ಎಲ್ಲರನ್ನೂ ಕುರಿತು, ಸ್ವಲ್ಪ ತಡೆಯಿರಿ, ಈ ಮನುಷ್ಯನನ್ನು ನಾನು ನೋಡಿದಹಾಗಿದೆ. ನೋಡಿ ಹೇಳುತ್ತೇನೆಂದು ಹೇಳಿದನು. ಕತ್ತಿಯನ್ನೆತ್ತಿದ್ದವನು ಕ್ರುದ್ಧಭಾವದಿಂದ, ನೀನು ಎಲ್ಲರನ್ನೂ ಕಂಡಿರುತ್ತೀಯೆ; ಎಲ್ಲರೂ ನಿನ್ನ ಆತ್ಮೀಯಕುಟುಂಬದವರು, ನೀನು ಸ್ವಲ್ಪ ಸರಿದು ನಿಲ್ಲು, ನಾನು ಬಾಬುವಿನ ಪರಿಚಯವನ್ನು ವಿಚಾರಿಸಿಕೊಳ್ಳುತ್ತೇನೆಂದನು. ಆಗ ರಾಮೇಶ್ವರನು ದರ್ಪದಿಂದ ಕತ್ತಿಯನ್ನು ತಿರುಗಿಸುತ್ತ, ಎಲ್ಲರೂ ದೂರ ಹೋಗಿರಿ. ಕತ್ತಿಯು ತಗಲಿದರೆ ನಾನು ಹೊಣೆಯುಲ್ಲವೆಂದು ಹೇಳಿದನು. ಇದನ್ನು ಕೇಳಿ ಎಲ್ಲರೂ ದೂರಸರಿದು ನಿಂತರು. ಅನಂತರ ರಾಮೇಶ್ವರನು, ಬಾಬು ! ನೀನು ಡಾಕ್ಟರನೆ ? ಎಂದು ಕೇಳಿದನು. ಬಾಬುವು, ನಾನು ಡಾಕ್ಟರು, ನನ್ನನ್ನುಳಿಸು, ನಾನು ಚಿರಕಾಲ ನಿನ್ನ ಕ್ರೀತದಾಸನಾಗಿರುವೆನೆಂದು ಹೇಳಿದನು.

ರಾಮೇಶ್ವರನು, ಭಯವೇನೂ ಇಲ್ಲ ; ನಾನೇ ನಿನ್ನ ಕ್ರೀತನಾದ ದಾಸನಾಗಿದ್ದೇನೆಂದು ಹೇಳಿ, ಇತರ ಕಳ್ಳರನ್ನು ಕರೆದು ಏನೋ ಹೇಳಿದನು. ಅವರು ಇದನ್ನು ನೋಡಿ, ಅವರ ಉದ್ದಿಷ್ಟವಾದ ಕೆಲಸಕ್ಕೋಸ್ಕರ ಹೊರಟುಹೋದರು. ಅನಂತರ ಡಾಕ್ಟರಬಾಬುವು ಕಳ್ಳನನ್ನು ಕುರಿತು, ನೀನು ನನ್ನನ್ನು ಹೇಗೆ ಗುರುತಿಸಿದೆ, ನನ್ನನ್ನು ರಕ್ಷಿಸಿದೆ ಏತಕ್ಕೆ ? ಇದನ್ನೆಲ್ಲಾ ಸವಿಶೇಷವಾಗಿ ಕೇಳಲು ಇಷ್ಟವುಳ್ಳವನಾಗಿದ್ದೇನೆಂದನು.

ಕಳ್ಳ—ಈಗ ಕೆಲವು ವರುಷಗಳಿಗೆ ಹಿಂದೆ ನಾನು ಘಾಯಪಟ್ಟು ಒಂದು ಅಡವಿಯಲ್ಲಿ ಬಿದ್ದಿದ್ದೆನು, ನೀನು ನನ್ನನ್ನು ಕರೆದುಕೊಂಡು ಹೋಗಿ ಪ್ರಾಣ ದಾನವನ್ನು ಮಾಡಿದೆ. ಗ್ರಾಮಸ್ಥರ ಕೈಯಿಂದ ರಕ್ಷಿಸಿ ಪೊಲೀಸಿನವರ ಕೈಯಿಂದ ತಪ್ಪಿಸಿದೆ. ನಾನು ನಿನಗೆ ಚಿರಕಾಲ ವಿಕ್ರೀತನಾಗಿದ್ದೇನೆ. ನಡೆ, ನಿನ್ನನ್ನು ಈ ಘಾಟಿಯಿಂದ ಪಾರಮಾಡಿಬಿಟ್ಟು ಬರುತ್ತೇನೆ.

ಡಾಕ್ಟರನು ದಸ್ಯುವಿನ ಈ ರೀತಿಯಾದ ಕೃತಜ್ಞತೆಯನ್ನು ನೋಡಿ, ನೀನು ಸ್ವಭಾವತಃ ಮಹಾತ್ಮನು, ಏತಕ್ಕೆ ಈ ದಸ್ಯುವೃತ್ತಿಯನ್ನವಲಂಬಿಸಿದೆ ಎಂದು ಕೇಳಿದನು.

ರಾಮೇಶ್ವರನು ದೀರ್ಘನಿಶ್ವಾಸವನ್ನು ಬಿಟ್ಟು ನೀರವವಾಗಿದ್ದನು. ಇದನ್ನು ಕಂಡು ಡಾಕ್ಟರನು ಈ ಮನುಷ್ಯನು ಗುರುತರವಾದ ಮನೋದುಃಖ ದಿಂದ ದಸ್ಯುವಾಗಿರಬೇಕೆಂದು ತಿಳಿದು, ಪ್ರಯತ್ನಪಟ್ಟರೆ ಇವನನ್ನು ಕೆಟ್ಟಮಾರ್ಗ ದಿಂದ ತಪ್ಪಿಸಬಹುದು, ಅದಲ್ಲದೆ ಇವನು ನನ್ನ ಪ್ರಾಣರಕ್ಷಣೆ ಮಾಡಿರುವುದರಿಂದ ಇವನ ಉದ್ಧಾರಕ್ಕೆ ಉಪಾಯವನ್ನು ಹುಡುಕಬೇಕೆಂದು ಯೋಚಿಸಿ, ಅವನು ರಾಮೇಶ್ವರನನ್ನು ಕುರಿತು, ನೀನು ಯಾರು? ಏತಕ್ಕೆ ನಿನಗೆ ಈ ದಸ್ಯುವೃತ್ತಿ ಯುಂಟಾಯಿತು? ನಿನ್ನ ವೃತ್ತಾಂತವನ್ನು ಕೇಳಲು ಬಹಳ ಕುತೂಹಲವುಂಟಾ ಗಿದೆ, ನಿನಗೇನೂ ಆಕ್ಷೇಪವಿಲ್ಲದಿದ್ದರೆ ನನಗೆ ನಿನ್ನ ಪರಿಚಯುವನ್ನು ಹೇಳಿ ಮನಸ್ಸು ಸಂತೋಷಪಡಿಸಬೇಕು. ನೀನು ನನ್ನ ಪ್ರಾಣವನ್ನುಳಿಸಿರುವುದರಿಂದ ನನ್ನಿಂದ ನಿನಗೇನೂ ಅನಿಷ್ಟವುಂಟಾಗಲಾರದೆಂದನು.

ದಸ್ಯು—ನೀನೂ ನನಗೆ ಒಂದು ತಡವೆ ಪ್ರಾಣದಾನವನ್ನು ಮಾಡಿರುತ್ತಿ. ಅದುಕಾರಣ ನಿನ್ನಿಂದ ಈಗ ನನ್ನ ಜೀವನಕ್ಕೆ ಏನಾದರೂ ವಿಘ್ನವುಂಟಾದರೆ ನನ್ನ ಆಕ್ಷೇಪಣೆಯೇನೂ ಇರದು.

ಹೀಗೆಂದು ಹೇಳಿ ತನ್ನ ಪೂರ್ವವೃತ್ತಾಂತವನ್ನು ಹೇಳತೊಡಗಿದನು. ಕಡೆಗೆ ಕಣ್ಣೊರಿಸಿಕೊಂಡು, ನನ್ನ ಮಗನು ಬದುಕಿದ್ದರೆ! ಅವನನ್ನು ಪುನಃ ನೋಡುವೆನಾದರೆ! ಎಂದು ಹೇಳಿ ಸ್ತಬ್ಧನಾಗಿದ್ದನು. ಪುನಃ ಅವನ ಕಣ್ಣುಗಳಿಂದ ಅಜಸ್ರವಾಗಿ ಜಲಧಾರೆಯು ಹೊರಡಲಾರಂಭವಾಯಿತು. ಡಾಕ್ಟರನೂ ಅವ ನೊಂದಿಗೆ ಅಳುವುದಕ್ಕೆ ತೊಡಗಿದನು. ಸ್ವಲ್ಪಹೊತ್ತಿನಮೇಲೆ ಡಾಕ್ಟರನು ಕಣ್ಣೊರಸಿಕೊಂಡು, ನನಗೆ ಆ ಭಾತಿ ಗ್ರಾಮವು ಗೊತ್ತು. ನಾನು ಅಲ್ಲಿಗೆ

ಹೋಗಿ ಚಿಕಿತ್ಸೆ ಕೆಲಸದಲ್ಲಿ ಕೆಲವು ದಿನಗಳಿದ್ದೆನು. ನಿನ್ನ ಪೂರ್ವ ವೃತ್ತಾಂತವನ್ನು ಅಲ್ಲಿನ ನವಾಬನಿಂದಲೂ ಇತರ ಜನರಿಂದಲೂ ಕೇಳಿದ್ದೇನೆ. ನೀನು ಬಹಳ ಮಂದಭಾಗ್ಯನು. ಅದುಕಾರಣ ನೀನು ಭಯಂಕರವಾದ ಭ್ರಮೆಯಲ್ಲಿ ಬಿದ್ದು ಸರ್ವತ್ಯಾಗಿಯಾಗಿ ದ್ವೀಪಾಂತರಕ್ಕೆ ಹೊರಟುಹೋದೆ ಎಂದನು.

ರಾಮೇಶ್ವರನು ವಿಸ್ಮಿತನಾಗಿ, ಅದು ಹೇಗೆ? ಎಂದು ಕೇಳಿದನು.

ಡಾಕ್ಟರ—ನೀನು ಸಂತೆಗೆ ಹೋಗುವ ಹಾದಿಯಲ್ಲಿ ಕುಳಿತುಕೊಂಡು ನೋಡಿ ಪಾರ್ವತಿಯೆಂದು ತಿಳಿದುಕೊಂಡ ಹೆಂಗಸು ಪಾರ್ವತಿಯಲ್ಲ.

ರಾಮೇಶ್ವರ—ಆದರೂ ಒಂದೇ, ಆಗದಿದ್ದರೂ ಒಂದೇ. ಅವಳು ಪಾಪಿಷ್ಠಳು. ಎಲ್ಲಿಯೋ ವೇಶ್ಯಾವೇಶದಲ್ಲಿ ಕಾಲಹಾಕುತ್ತಾಳೆ.

ಡಾಕ್ಟರನು, ಹಾಗಲ್ಲ. ಅವಳು ನಿನ್ನ ಶೋಕದಿಂದ ಪದ್ಮಾನದಿಯ ನೀರಿನಲ್ಲಿ ಧುಮುಕಿಬಿಟ್ಟಿದ್ದಳು.

ರಾಮೇಶ್ವರನು ಈ ಮಾತನ್ನು ನಂಬದೆ ನಕ್ಕನು.

ಹೇಗಾದರೂ ಆಗಲಿ. ಡಾಕ್ಟರನಿಗೆ ನಿಜವಾದ ವೃತ್ತಾಂತವು ಗೊತ್ತು. ನಾಯಬನಿಂದಲೂ ಇನಸ್ಪೆಕ್ಟರನಿಂದಲೂ, ಪಾರ್ವತಿಯು ಪದ್ಮಾದಲ್ಲಿ ಮುಣುಗಿ ಹೋದುದಾಗಿ ತಿಳಿದಿದ್ದ ವೃತ್ತಾಂತದವರೆಗೂ ರಾಮೇಶ್ವರನಿಗೆ ತಿಳಿಸಿದನು. ರಾಮೇಶ್ವರನು ಕೇಳಿ, ತನ್ನ ಯಜ್ಞೋಪವೀತವನ್ನು ಹಿಡಿದುಕೊಂಡು ಅದನ್ನು ಡಾಕ್ಟರನ ಕೈಯಲ್ಲಿಟ್ಟು, ನನ್ನನ್ನು ವಂಚಿಸಬೇಡ, ಪ್ರಮಾಣವಾಗಿ ಹೇಳು, ನೀನು ಹೇಳುವುದು ಸತ್ಯವಾದುದೆ? ಸುಳ್ಳು ಹೇಳಿದರೆ ಬ್ರಾಹ್ಮಣಹತ್ಯ ಮಾಡಿದ ಪಾಪಕ್ಕೆ ಗುರಿಯಾಗುವೆ, ನೀನು ಹೇಳುವುದೆಲ್ಲಾ ನಿಜವೆ? ಎಂದು ಕೇಳಿದನು.

ಡಾಕ್ಟರ—ಇದೆಲ್ಲಾ ಸತ್ಯವಾದ ಮಾತು.

ಆಗ ರಾಮೇಶ್ವರನು ಮೆಲ್ಲಮೆಲ್ಲನೆ ಆ ಚಂದ್ರಕರೋಜ್ವಲವಾದ ಕೋಮಲವಾದ ಪುಷ್ಪಶೋಭಿತವಾದ ತೀರಭೂಮಿಯಲ್ಲಿ ಕುಳಿತುಕೊಂಡನು. ಎರಡು ಕೈಗಳಿಂದಲೂ ಮುಖಮಂಡಲವನ್ನು ಮುಚ್ಚಿಕೊಂಡನು. ಕ್ರಮವಾಗಿ ಅವನ ಮೈಯೆಲ್ಲಾ ನಡುಗಲಾರಂಭವಾಯಿತು. ಕ್ಷಣಕಾಲದಮೇಲೆ ರಾಮೇಶ್ವರನು ಭೂಮಿಯಮೇಲೆ ಬಿದ್ದು ಹೊರಳಾಡುತ, ಪಾರ್ವತಿ! ಪಾರ್ವತಿ! ಎಂದು ಗಟ್ಟಿಯಾಗಿ ಅಳುವುದಕ್ಕಾರಂಭ ಮಾಡಿದನು. ಅವನ ಸಹಿಸಲಸದಳವಾದ ಯಾತನೆಯನ್ನು ನೋಡಿ ಡಾಕ್ಟರನು ಅವನನ್ನು ಸಮಾಧಾನಗೊಳಿಸಿ ಕೈಹಿಡಿದು ಎಬ್ಬಿಸಿದನು. ಅನಂತರ ನೀನು ಅಳಬೇಡ, ಈ ದುಃಖಸಮಯದಲ್ಲಿ ನಿನಗೆ ಒಂದು ಶುಭಸಮಾಚಾರವನ್ನು ಹೇಳುತ್ತೇನೆ. ನಿನ್ನ ಮಗನು ಸತ್ತುಹೋಗಿಲ್ಲವೆಂದನು.

ರಾಮೇಶ್ವರನು ಮಿಂಚಿನ ವೇಗದಿಂದೆದ್ದು, ನನ್ನ ದುಲ್ಲಾಲನು ಬದುಕಿದ್ದಾನೆಯೆ? ಆ ನನ್ನವನೆಲ್ಲಿ? ಬೇಗನೆ ಹೇಳು! ಎಂದನು.

ನಿನ್ನ ಮಗನು ನಿನ್ನ ಪಾದಮೂಲದಲ್ಲಿದ್ದಾನೆಂದು ಹೇಳಿ ಡಾಕ್ಟರಬಾಬುವು ರಾಮೇಶ್ವರನ ಪಾದತಳದಲ್ಲಿ ಬಿದ್ದು ಅಶ್ರುವರ್ಷಣ ಮಾಡಿದನು. ರಾಮೇಶ್ವರನಿಗೆ ಯಾವುದೂ ಗೊತ್ತಾಗಲಿಲ್ಲ. ಕ್ರಮವಾಗಿ ಗೊತ್ತಾಯಿತು. ಎರಡು ಕೈಗಳಿಂದಲೂ ಮಗನ ಮುಖವನ್ನೆತ್ತಿ ನೋಡಿದನು. ಕಣ್ಣಿನ ನೀರಿನಿಂದ ಯಾವುದೂ ಗೊತ್ತಾಗದು. ಅನಂತರ ಮಗನ ಮಸ್ತಕವನ್ನು ಎದೆಗೆ ಔಚಿಕೊಂಡು ಅಳುತಳುತ, ನಿಜವೇ ಹೌದು, ಇವನೇ ನನ್ನ ಆನಂದದುಲ್ಲಾಲನೆಂದು ಹೇಳಿದನು. ಸ್ವಲ್ಪ ಹೊತ್ತಿನಮೇಲೆ ಮಗನು ಪಿತನ ವಕ್ಷದಿಂದ ತಲೆಯನ್ನೆತ್ತಿಕೊಂಡು, ಈಗ ತಾವು ಈ ಪಲ್ಲಕ್ಕಿಯಲ್ಲಿ ಕುಳಿತು ಮನೆಗೆ ದಯಮಾಡಿಸೋಣಾಗಲಿ. ಅನಂತರ ನಾನು ಹೇಗೆ ಪ್ರತಿಪಾಲಿತನಾಗಿ ವಿದ್ಯಾಬುದ್ಧಿಯನ್ನು ಕಲಿತೆನೋ ಅದನ್ನೆಲ್ಲಾ ವಿಸ್ತಾರವಾಗಿ ವಿವರಿಸಿ ಹೇಳುವೆನೆಂದನು.

ರಾಮೇಶ್ವರನು ಮನಸ್ಸಿನಲ್ಲಿ, ಈಗ ಮಗನೊಂದಿಗೆ ಹೋದರೆ ಮಗನು ಕಾಲುನಡೆಗೆಯಲ್ಲಿ ಬರಬೇಕಾಗುವುದೆಂದು ಯೋಚಿಸಿ ನೀನು ಮೊದಲು ಮುಂದಾಗಿ ಹೋಗು. ನಿನ್ನ ಮನೆ ಇರುವ ಸ್ಥಳದ ಗುರುತನ್ನು ಹೇಳಿ ಹೋದರೆ ನಾನು ನಾಳೆ ಬಂದು ತಲಪುವೆನು ಎಂದನು. ಆನಂದದುಲ್ಲಾಲನು ಎಷ್ಟುವಿಧವಾಗಿ ಹೇಳಿಕೊಂಡರೂ ರಾಮೇಶ್ವರನು ಒಪ್ಪಲಿಲ್ಲವಾಗಿ ಮಗನು ಮುಂದಾಗಿ ಹೋದನು. ರಾಮೇಶ್ವರನು ಆ ನದಿಯ ತೀರದಲ್ಲಿ ಕುಳಿತುಕೊಂಡು ಸಾಧ್ವಿಯಾದ ಪಾರ್ವತಿಗೋಸ್ಕರ ಬಹಳ ರೋದನಮಾಡಿದನು.

ಮರುದಿನ ರಾಮೇಶ್ವರನು ಪುತ್ರನ ಭವನಕ್ಕೆ ಬಂದು ಪುತ್ರನನ್ನು ಪುನಃ ಆಲಿಂಗನೆ ಮಾಡಿದನು. ಆ ಸಮಯದಲ್ಲಿ ಅರ್ಧಾವಗುಂಠನಾವೃತಳಾದ ಒಬ್ಬ ಹೆಂಗಸು ಬಂದು ರಾಮೇಶ್ವರನ ಪಾದಗಳಮೇಲೆ ಬಿದ್ದು ಉಚ್ಚಸ್ವರದಿಂದ ಅಳಲಾರಂಭಿಸಿದಳು. ಕಂಠಸ್ವರವನ್ನು ಕೇಳುತಲೆ ರಾಮೇಶ್ವರನು ಚಮಕಿತನಾದನು. ಇದಾರ ಕಂಠ! ಎರಡು ಕೈಗಳಿಂದಲೂ ಅವಳನ್ನೆಬ್ಬಿಸಿ ದೃಷ್ಟಿಸಿ ನೋಡಿದನು— ಗುರುತಾಯಿತು, ಭೂಪತಿತಳಾಗಿದ್ದವಳು ಪಾರ್ವತಿ!

ಆಗ ರಾಮೇಶ್ವರನು ಮಗನ ಕಡೆ ತಿರುಗಿಕೊಂಡು. ಅದು ಹೇಗೆ! ನೀನು ಹೇಳಿದುದರಲ್ಲಿ ನಿನ್ನ ತಾಯಿಯು ಪದ್ಮಾನದಿಯಲ್ಲಿ ಬಿದ್ದು ಮುಣುಗಿ ಹೋದಳೆಂದು ಹೇಳಿದೆ ಎಂದನು.

ಆನಂದದುಲ್ಲಾಲನು ನಾನು ಸತ್ಯವಾದುದನ್ನೇ ಹೇಳಿದೆ. ತಾಯಿಯು ಪದ್ಮಾನದಿಯಲ್ಲಿ ಧುಮುಕಿಬಿಟ್ಟಳು. ಆದರೆ ಸಾಯಲಿಲ್ಲ. ಜಲಗಾರರು ಎತ್ತಿ ಮೇಲೆ ಹಾಕಿದ್ದರು. ಅದನ್ನೆಲ್ಲಾ ಕಡೆಗೆ ಹೇಳುವೆನೆಂದನು.

ಆಗ ಮೂರು ಜನರೂ ಆಹ್ಲಾದದಿಂದ ಏಕತ್ರ ಕುಳಿತುಕೊಂಡು ಅಳುತಳುತ ಪೂರ್ವ ವೃತ್ತಾಂತವನ್ನು ಪರಸ್ಪರ ಹೇಳಿಕೊಳ್ಳುತಿದ್ದರು.